# ಮಕ್ಕಳ ಬೆಳವಣಿಗೆ, ಮಾನಸಿಕ ಆರೋಗ್ಯ, ಬುದ್ಧಿಮಾಂದ್ಯ ಮತ್ತು ಅಂಗವಿಕಲತೆಗಳ ಬಗ್ಗೆ ಶಾಲಾ ಶಿಕ್ಷಕರಿಗೆ ಕೈಪಿಡಿ


ಮಾಲವಿಕಾ ಕಪೂರ್

ಮತ್ತು

ಉಮಾ ಎಚ್.

ಕನ್ನಡ ರೂಪಾಂತರ

ಎನ್. ಗೋಪಾಲಕೃಷ್ಣ






**ಗ್ರಾಮೀಣ ಸಂಸ್ಥೆಗಳ ರಾಷ್ಟ್ರೀಯ ಮಂಡಳಿ**

ಮಾನವ ಸಂಪನ್ಮೂಲಾಭಿವೃದ್ಧಿ ಸಚಿವಾಲಯ, ನವದೆಹಲಿ

ಮತ್ತು





**ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ**

ರಾಷ್ಟ್ರೀಯ ಪ್ರಾಮುಖ್ಯತಾ ಸಂಸ್ಥೆ, ಬೆಂಗಳೂರು

# ಮಕ್ಕಳ ಬೆಳವಣಿಗೆ, ಮಾನಸಿಕ ಆರೋಗ್ಯ, ಬುದ್ಧಿಮಾಂದ್ಯ ಮತ್ತು ಅಂಗವಿಕಲತೆಗಳ ಬಗ್ಗೆ ಶಾಲಾ ಶಿಕ್ಷಕರಿಗೆ ಕೈಪಿಡಿ


**ಮಾಲವಿಕಾ ಕಪೂರ್**

ಮತ್ತು

**ಉಮಾ ಎಚ್.**

ಕನ್ನಡ ರೂಪಾಂತರ

**ಎನ್. ಗೋಪಾಲಕೃಷ್ಣ**





**ಗ್ರಾಮೀಣ ಸಂಸ್ಥೆಗಳ ರಾಷ್ಟ್ರೀಯ ಮಂಡಳಿ**

ಮಾನವ ಸಂಪನ್ಮೂಲಾಭಿವೃದ್ಧಿ ಸಚಿವಾಲಯ, ನವದೆಹಲಿ

ಮತ್ತು





**ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆ**

ರಾಷ್ಟ್ರೀಯ ಪ್ರಾಮುಖ್ಯತಾ ಸಂಸ್ಥೆ, ಬೆಂಗಳೂರು

ಮಕ್ಕಳ ಬೆಳವಣಿಗೆ, ಮಾನಸಿಕ ಆರೋಗ್ಯ, ಬುದ್ಧಿಮಾಂದ್ಯ ಮತ್ತು ಅಂಗವಿಕಲತೆಗಳ ಬಗ್ಗೆ ಶಾಲಾ ಶಿಕ್ಷಕರಿಗೆ ಕೈಪಿಡಿ
ಲೇಖಕರು: ಮಾಲವಿಕಾ ಕಪೂರ್ ಮತ್ತು ಉಮಾ ಎಚ್.

Published by National Council of Rural Institutes (HRD Ministry), New Delhi and National Institute of Mental Health & Neuro Sciences (Institute of National Importance), Bengaluru - 29.

ISBN: 81-86418-00-X

Illustrations: Dr. Keshav Kumar
Illustration: 4th Cover: Rathnamma

NIMHANS Publication No. 59


First Edition: 2006
Second Edition: 2018

Price : Rs.30/-

**Typeset & Printed by**

*Aditi Enterprises*
*Bengaluru - 560 023*
*Ph.: 080-2310 7302*
*E-mail: aditiprints@gmail.com*



# ಮಕ್ಕಳ ಬೆಳವಣಿಗೆ, ಮಾನಸಿಕ ಆರೋಗ್ಯ, ಬುದ್ಧಿ ಮಾಂದ್ಯ ಮತ್ತು ಅಂಗವಿಕಲತೆಗಳ ಬಗ್ಗೆ ಶಾಲಾ ಶಿಕ್ಷಕರಿಗೆ ಕೈಪಿಡಿ

## ಪರಿಚಯ:

ನಮ್ಮ ದೇಶದಲ್ಲಿ ಶಿಕ್ಷಕರು, ವಿಶೇಷವಾಗಿ ನಗರ ಮತ್ತು ಗ್ರಾಮೀಣ ಪ್ರದೇಶಗಳ ಸರಕಾರಿ ಶಾಲಾ ಶಿಕ್ಷಕರು ಪಾಠ ಹೇಳುವುದಲ್ಲದೆ ಅನೇಕ ಇತರ ಹಲವಾರು ಕೆಲಸಗಳನ್ನೂ ಮಾಡಬೇಕಾಗುತ್ತದೆ. ಅವುಗಳಲ್ಲಿ ಕೆಲವೆಂದರೆ

- ಶಾಲೆಗೆ ನೋಂದಾಯಿಸಿಕೊಂಡವರ ಹಾಜರಾತಿ ಮತ್ತು ಶಾಲೆಯಿಂದ ಹೊರಬೀಳುವ ಮಕ್ಕಳ ಅಂಕೆ ಸಂಖ್ಯೆಗಳನ್ನು ಸಂಗ್ರಹಿಸಿ ಶಿಕ್ಷಣ ಅಧಿಕಾರಿಗಳಿಗೆ ಒದಗಿಸುವುದು.
- ಜನಗಣತಿ ಕೆಲಸ
- ಚುನಾವಣಾ ಸಂಬಂಧದ ಕೆಲಸಗಳು
- ಮಕ್ಕಳಿಗೆ ಪಠ್ಯಪುಸ್ತಕ ಮತ್ತು ಸಮವಸ್ತ್ರಗಳನ್ನು ಸಂಗ್ರಹಿಸುವುದು
- ಕುಟುಂಬಗಳಿಗೆ ತಿಂಗಳಿಗೊಮ್ಮೆ ಪಡಿತರ ಸಂಗ್ರಹಣೆ
- ಸರಕಾರಿ ಮತ್ತು ಆಶ್ರಮ ಶಾಲೆಗಳಲ್ಲಿ ಪಡಿತರ ಸಂಗ್ರಹಣೆ ಮಾಡಿ ಮಧ್ಯಾಹ್ನದ ಬಿಸಿಯೂಟ ಒದಗಿಸುವ ಕೆಲಸ
- ಆಶ್ರಮ ಶಾಲೆಗಳಲ್ಲಿ ಬೆಳಗಿನ ಉಪಾಹಾರ, ಮಧ್ಯಾಹ್ನದ ಊಟ ಮತ್ತು ರಾತ್ರಿಯ ಭೋಜನವನ್ನು ತಯಾರಿಸಿ ಬಡಿಸುವುದು.
- ಆಶ್ರಮ ಶಾಲೆಗಳ ಸೌಲಭ್ಯ ಇರುವಲ್ಲಿ ಅಲ್ಲಿನ ನಿವಾಸಿಗಳಿಗೆ ಬಟ್ಟೆ ಒಗೆಯುವ, ಸ್ನಾನ ಮಾಡಿಸುವ, ತಲೆ ಬಾಚುವ ಮತ್ತು ಬಟ್ಟೆ ಧರಿಸುವ ಕೆಲಸಗಳ ಉಸ್ತುವಾರಿ ಮಾಡುವುದು
- ಪ್ರತಿದಿನ ಮಕ್ಕಳಿಗೆ ಆಹಾರ ಒದಗಿಸುವುದಕ್ಕೆ ಶಿಕ್ಷಕರು ಬಹಳ ಸಮಯವನ್ನು ಕಳೆಯಬೇಕಾಗುತ್ತದೆ
- ಶಿಕ್ಷಕರ ಸಭೆಗಳಿಗೆ ಹಾಜರಾಗುವುದು
- ಶಿಕ್ಷಣ ಇಲಾಖೆ ಆಯೋಜಿಸುವ ಶಿಕ್ಷಕರ ತರಬೇತಿ ಕಾರ್ಯಗಳಲ್ಲಿ ಭಾಗವಹಿಸುವುದು
- ಭೋಧನ ಸಹಾಯಕ ವಸ್ತುಗಳನ್ನು ತಯಾರಿಸುವುದು
- ಎಲ್ಲ ಮಕ್ಕಳ ಆರೋಗ್ಯ ದಾಖಲೆಗಳನ್ನು ವ್ಯವಸ್ಥಿತವಾಗಿ ಇರಿಸುವುದು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕಾರ್ಯಕರ್ತರೊಡನೆ ವ್ಯವಹರಿಸುವುದು
- ಸಮುದಾಯಗಳನ್ನು ತಲುಪುವ ಕಾರ್ಯಕ್ರಮಗಳನ್ನು ವ್ಯವಸ್ಥೆ ಮಾಡುವುದು

ಇವೆಲ್ಲವುಗಳಲ್ಲದೆ, ಶಿಕ್ಷಕರು ಪಾಠಹೇಳುವುದು, ಪರೀಕ್ಷೆಗಳನ್ನು ನಡೆಸುವುದು ಮತ್ತು ಫಲಿತಾಂಶಗಳನ್ನು ಘೋಷಣೆ ಮಾಡಬೇಕು.

ನಗರ ಪ್ರದೇಶಗಳಲ್ಲಿ ಅತಿಕಡಿಮೆ ಸೌಲಭ್ಯಗಳಿದ್ದು, ಮತ್ತು ತರಗತಿಗಳಲ್ಲಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳನ್ನು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಹಲವು ತರಗತಿಗಳನ್ನು ಒಬ್ಬರೇ ಶಿಕ್ಷಕರು ನೋಡಿಕೊಳ್ಳಬೇಕಾಗಬಹುದು. ಅದು ಸುಲಭದ ಕೆಲಸವಲ್ಲ. ಸಾಮಾನ್ಯವಾಗಿ ಶಾಲೆಗಳಲ್ಲಿ ಈ ಕೆಳಕಂಡ ಸೌಲಭ್ಯಗಳ ಕೊರತೆ ಇರುತ್ತದೆ.

- ಗ್ರಾಮೀಣ ಪ್ರದೇಶಗಳಲ್ಲಿ ತರಗತಿ ಅಥವಾ ನಗರ ಪ್ರದೇಶಗಳಲ್ಲಿ ಆಟದ ಮೈದಾನ ಪ್ರದೇಶ
- ಪೀಠೋಪಕರಣಗಳು

- ಪುಸ್ತಕ ಮತ್ತು ಬರವಣಿಗೆಯ ಸಾಧನಗಳು
- ಕುಡಿಯುವ ನೀರು
- ಶೌಚಾಲಯಗಳು
- ವಿದ್ಯುತ್‌ಶಕ್ತಿ
- ಕ್ರೀಡೆಗಳು ಮತ್ತು ಕ್ರೀಡಾ ವಸ್ತುಗಳು
- ಗ್ರಂಥಾಲಯ ಮತ್ತು ಪ್ರಯೋಗಾಲಯ ಸೌಲಭ್ಯಗಳು

**ಸರಕಾರಿ ಶಾಲೆಗಳಲ್ಲಿರುವ ಒಂದೇ ಸಂಪನ್ಮೂಲವೆಂದರೆ ಮಕ್ಕಳು.** ಶಿಕ್ಷಕರಿಗೆ ಕೆಲಸದ ಹೊರೆ ಇರುತ್ತದೆ, ಅಲ್ಲದೆ ಸೌಲಭ್ಯಗಳ ಕೊರತೆಯಿಂದ ಕೆಳಗಿನ ಸಮಸ್ಯೆಗಳೂ ಕೂಡ ಕಂಡುಬರುತ್ತವೆ. ಈ ಸಮಸ್ಯೆಗಳು ಮಕ್ಕಳಲ್ಲಿ ಮತ್ತು ದೊಡ್ಡವರಲ್ಲಿ ಇಬ್ಬರಲ್ಲೂ ಇರುತ್ತವೆ.

- ಪ್ರೇರಣೆ ಇಲ್ಲದಿರುವುದು
- ಆಸಕ್ತಿ ಇಲ್ಲದಿರುವುದು
- ಬದ್ಧತೆ ಇಲ್ಲದಿರುವುದು
- ತಕ್ಕ ಶಿಸ್ತು ಮತ್ತು ನಿರ್ಧಾರವಿಲ್ಲದಿರುವುದು

ಬೋಧನೆ ಮತ್ತು ಕಲಿಕೆಯ ಕೆಲವು ಮುಖ್ಯ ಅಂಶಗಳು ಮತ್ತು ಅವರು ಎದುರಿಸುವ ತೊಡಕುಗಳ ಬಗ್ಗೆ ಶಿಕ್ಷಕರಿಗೆ ತಿಳುವಳಿಕೆ ಕೊಡಲು ಈ ಕೈಪಿಡಿಯಲ್ಲಿ ಪ್ರಯತ್ನ ಮಾಡಲಾಗಿದೆ.
ಇಲ್ಲಿ ವಿಚಾರ ಮಾಡಲಾಗಿರುವ ಮುಖ್ಯ ವಿಷಯಗಳು

- ಮಗುವಿನ ಸಮಗ್ರ ಬೆಳವಣಿಗೆ
- ಕಲಿಯುವಿಕೆ ಮತ್ತು ಹೊಂದಿಕೊಳ್ಳುವಿಕೆಯಲ್ಲಿ ಮನೋವೈಜ್ಞಾನಿಕ ಮಾನಸಿಕ ಆರೋಗ್ಯ ಸಮಸ್ಯೆಗಳು
- ತರಗತಿಗಳಲ್ಲಿ ಮುಖ್ಯವಾಹಿನಿಯಲ್ಲಿರುವುದು ಮತ್ತು ನ್ಯೂನತೆ ಇರುವ ಮಕ್ಕಳನ್ನು ಇತರ ಮಕ್ಕಳೊಡನೆ ತರಗತಿಗಳಲ್ಲಿ ಇರಿಸುವುದು.

## ಮಗುವಿನ ಸಮಗ್ರ ಬೆಳವಣಿಗೆ

ಮಕ್ಕಳ ಸಾಮಾನ್ಯ ಬೆಳವಣಿಗೆ ಎಂದರೆ, ಶೈಶವಾವಸ್ಥೆಯಿಂದ ಬಾಲ್ಯಾವಸ್ಥೆಯಿಂದ ಹದಿಹರೆಯದವರಿಗೆ. ಈ ಕೆಳಗಿನ ಕ್ಷೇತ್ರಗಳಲ್ಲಿ ಆಗುವ ಬೆಳವಣಿಗೆ.

- ದೈಹಿಕ ಶಕ್ತಿ
- ಬುದ್ಧಿ ಶಕ್ತಿ ಅಥವಾ ಬೌದ್ಧಿಕ
- ಭಾಷೆ
- ಭಾವನಾತ್ಮಕ
- ಸಾಮಾಜಿಕ
- ನೈತಿಕ
- ಲೈಂಗಿಕ

ಮೇಲೆ ನಮೂದಿಸಲಾದ ಕ್ಷೇತ್ರಗಳು ಮಕ್ಕಳಿಗೆ, ತಂದೆ ತಾಯಿಯರಿಗೆ ಮತ್ತು ಶಿಕ್ಷಕರಿಗೆ ಮಹತ್ವವಾದವು. ಹಿಂದಿನ

ದಶಕಗಳಲ್ಲಿ ಇದ್ದ ನಂಬಿಕೆಯೇನೆಂದರೆ ಹುಟ್ಟಿನಿಂದ ಮಕ್ಕಳ ಮನಸ್ಸು ಖಾಲಿ ಸ್ಲೇಟಿನಂತಿದ್ದು ಎಲ್ಲವನ್ನೂ ನಮ್ಮಿಂದ ಕಲಿಯುತ್ತಾರೆ ಎಂಬ ನಂಬಿಕೆ ಇತ್ತು. ಸಂಶೋಧನೆಯಿಂದ ಇತ್ತೀಚೆಗೆ ತಿಳಿದು ಬಂದಿರುವುದೆಂದರೆ, ಮಕ್ಕಳು ಹುಟ್ಟಿದ ಕೂಡಲೇ ಬಹಳ ವಿಷಯಗಳನ್ನು ಕಲಿತುಕೊಳ್ಳುವ ಮಹಾ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಮಗು ತನ್ನ ಬಗ್ಗೆ ಮತ್ತು ಇತರರ ಬಗ್ಗೆ ತಿಳಿದುಕೊಳ್ಳುವ ಸಾಮರ್ಥ್ಯವನ್ನು ಹುಟ್ಟುವಾಗಲೇ ಪಡೆದುಕೊಂಡಿರುತ್ತದೆ. ಮಗುವಿನ ಕಲಿಯುವಿಕೆಯ ಸಾಮರ್ಥ್ಯವನ್ನು ಆ ಮಗುವಿನೊಂದಿಗೆ ಹಾಗೂ ಇತರರೊಂದಿಗೆ ಹೋಲಿಸಬಾರದು. ಒಂದು ವಾರದ ವಯಸ್ಸಿನ ಮಗು ಸಹ ತನ್ನ ಕಣ್ಣಿನಿಂದ ವಸ್ತುಗಳನ್ನು ಗುರುತಿಸಬಲ್ಲದು. ತನ್ನ ತಾಯಿಯ ಮುಖವನ್ನು ಅಲ್ಲದೆ ಮುಖವಾಡಗಳ ವ್ಯತ್ಯಾಸವನ್ನು ತಿಳಿಯಬಲ್ಲದು ಮತ್ತು ಕೆಲವು ಚಲನವಲನಗಳನ್ನು ಅನುಕರಿಸಬಲ್ಲದು. ಒಂದೇ ರೀತಿಯ ವಸ್ತುಗಳನ್ನು ನೋಡುವ ಅಥವಾ ಶಬ್ದಗಳನ್ನು ಕೇಳಿಸಿಕೊಳ್ಳುವುದರಿಂದ ಅವರಿಗೆ ಬೇಸರವಾಗಿ ತಮ್ಮ ಗಮನವನ್ನು ಹೊಸ ಹೊಸ ವಿಷಯಗಳತ್ತ ಹರಿಸುತ್ತಾರೆ.

- ಉತ್ತಮ ಚಲನಾ ಕೌಶಲ್ಯಗಳನ್ನು ಪಡೆಯುವುದು (ಉತ್ತಮ ಚಲನೆ ಮತ್ತು ಸಮಗ್ರ ಚಲನೆಗಳು)
- ಪರಿಸರವನ್ನು ಅರಿಯುವುದು (ಗಮನ ಗ್ರಹಣ, ಅರ್ಥ, ಬುದ್ಧಿ ಸಮಸ್ಯೆಯ ಪರಿಹಾರ, ವಿಶ್ಲೇಷಣೆ, ಬೇರ್ಪಡಿಸುವಿಕೆ)
- ಭಾಷೆಗಳನ್ನು ಕಲಿಯುವುದು ಮತ್ತು ಚೆನ್ನಾಗಿ ಮಾತನಾಡುವುದು
- ಭಾವನೆಗಳನ್ನು ಅನುಭವಿಸುವುದು (ಭಾವನಾತ್ಮಕ)
- ಜನರೊಡನೆ ವ್ಯವಹಾರ (ಸಾಮಾಜಿಕ)
- ನೈತಿಕ ಮೌಲ್ಯಗಳನ್ನು ಬೆಳೆಸಿಕೊಳ್ಳುವುದು (ನೈತಿಕ)
- ಲೈಂಗಿಕ ತಿಳುವಳಿಕೆ (ಲೈಂಗಿಕತೆ)



ಸೂಕ್ತವಾದ ಪರಿಸರವಿದ್ದಾಗ ಇವೆಲ್ಲವೂ ಬಹು ಬೇಗನೆ ಅಭಿವೃದ್ಧಿಗೊಳ್ಳುತ್ತವೆ. ಮಹಾಭಾರತದ ಅಭಿಮನ್ಯು ಚಕ್ರವ್ಯೂಹದ ರಹಸ್ಯವನ್ನು ತನ್ನ ತಾಯಿಯ ಗರ್ಭದಲ್ಲಿರುವಾಗಲೇ ಕಲಿತ ಕಥೆಯನ್ನು ನಾವು ಕೇಳಿದ್ದೇವೆ. ಬಹಳ ಮಕ್ಕಳು ಹುಟ್ಟಿದಾಗಿನಿಂದಲೇ ಕಲಿಯಲು ಸಿದ್ಧವಾಗಿರುತ್ತವೆ. ಪರಿಸರವನ್ನು ನೋಡು ನೋಡುತ್ತಾ ಅದರಿಂದ ವಿಷಯಗ್ರಹಣ ಮಾಡುತ್ತಾ ಮಕ್ಕಳು ತಮ್ಮದೇ ಪ್ರಪಂಚವನ್ನು ಸೃಷ್ಟಿಸಿಕೊಳ್ಳುವುದನ್ನು ನಾವು ನೆನಪಿನಲ್ಲಿ ಇರಿಸಿಕೊಳ್ಳಬೇಕು. ಮಕ್ಕಳು ತಮಗೆ ಇಷ್ಟವಾದ ವಿಷಯಗಳನ್ನು ಗಮನಿಸಿ, ಬೇಗ ಅನುಕರಿಸುತ್ತವೆ. ಮಗುವಿನ ಶೈಶವಾವಸ್ಥೆ, ಬಾಲ್ಯ ಮತ್ತು ಹದಿಹರೆಯದಲ್ಲಿ ಮೇಲಿನ ಏಳೂ ಬೆಳವಣಿಗೆಯ ಕ್ಷೇತ್ರಗಳು ಬಹಳ ಬೇಗ ಜಾಗೃತವಾಗುತ್ತವೆ - ದೊಡ್ಡವರಾದಂತೆ ಮುಂದೆ ನಿಧಾನವಾಗಿ ಬಿಡುತ್ತವೆ.

**ಕಲಿಯಲು ಬಾಲ್ಯವೇ ಬಹಳ ಸೂಕ್ತ ಸಮಯ.** ಸಂಶೋಧನೆಯಿಂದ ಇದು ತಿಳಿದು ಬಂದಿರುವುದಾದರೂ, ಮಕ್ಕಳು ನಮ್ಮ ಶಾಲೆಗಳಲ್ಲಿ ಕಲಿಯುವಿಕೆಯಲ್ಲಿ ಏಕೆ ವಿಫಲರಾಗುತ್ತಾರೆ? ಅಥವಾ ಅವರು ಶಾಲೆಯಲ್ಲಿ ಕಲಿಯಲು ವಿಫಲರಾಗಿ, ಪರಿಸರದಲ್ಲಿ ನೋಡುವುದರ ಮೂಲಕ ಮತ್ತು ಕಥೆ ಕೇಳುವುದರ ಮೂಲಕ ಬಹಳ ಕಲಿಯುತ್ತಾರೆಯೇ? ಮಕ್ಕಳಿಗೆ ಏನು ತಿಳಿದಿದೆಯೆಂದು ಅರ್ಥಮಾಡಿಕೊಳ್ಳಲು ಶಿಕ್ಷಕರು ಪ್ರಯತ್ನ ಮಾಡುತ್ತಾರೆಯೇ? ಬಹಳ ಜನ ಶಿಕ್ಷಕರು ತಿಳಿದುಕೊಂಡಿರುವುದೇನೆಂದರೆ ಮಕ್ಕಳು ಶಿಕ್ಷಕರಿಂದಲೇ ಕಲಿಯುತ್ತಾರೆಂದು ನಂಬುತ್ತಾರೆ. ಮಕ್ಕಳನ್ನು ಮಣ್ಣಿನ ಮುದ್ದೆ ಅಥವಾ ಖಾಲಿ ಪಾತ್ರೆಗೆ ಹೋಲಿಸಲಾಗುತ್ತದೆ, ಶಿಕ್ಷಕರು ಅವರನ್ನು ಯಾವುದೇ ಆಕಾರಕ್ಕೆ ರೂಪಿಸಬಲ್ಲರು, ಇಲ್ಲವೇ ಖಾಲಿ ಪಾತ್ರೆಯನ್ನು ಶಿಕ್ಷಕರು ಭರ್ತಿ ಮಾಡುತ್ತಾರೆ ಎಂಬುದಾಗಿ ತಿಳಿದುಕೊಂಡಿರುತ್ತಾರೆ. ಶಿಕ್ಷಕರು ತಾವು ಜ್ಞಾನದ ಸಾಗರಗಳು ಮತ್ತು ಮಕ್ಕಳ ತಲೆ ಖಾಲಿ ಹಲಗೆ ಎಂಬುದಾಗಿಯೂ ತಿಳಿದುಕೊಂಡಿರುತ್ತಾರೆ! ದುರಾದೃಷ್ಟವಶಾತ್ ಈ ರೀತಿಯ ಮನೋಭಾವ ಮತ್ತು ನಂಬಿಕೆ ಅನೇಕ ಶಿಕ್ಷಕರಲ್ಲಿ ಮತ್ತು ವಯಸ್ಕರಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಅಸ್ಪೃಶ್ಯರಿಗೆ ಶಿಕ್ಷಣ ಕೊಡಲು ಸಾಧ್ಯವಿಲ್ಲ ಎಂಬ ಹೇಳಿಕೆಯಲ್ಲಿ ಇದು ಪ್ರತಿಬಿಂಬಿತವಾಗುತ್ತದೆ.

ಮಕ್ಕಳ ಬೆಳವಣಿಗೆಯ ಬಗ್ಗೆ ಚರ್ಚಿಸಲಾದ ಈ ವಿಭಾಗದಲ್ಲಿ, ಪ್ರಪಂಚವನ್ನು ಅರಿಯಲು ಅಥವಾ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಮಕ್ಕಳಿಗೆ ಸರಿಯಾದ ಸದಾವಕಾಶವನ್ನು ನೀಡಬೇಕೆಂಬುದರ ಬಗ್ಗೆ ಶಿಕ್ಷಕರಿಗೆ ತಿಳಿಸಲಾಗಿದೆ. ಅವಕಾಶ ಕೊಟ್ಟರೆ ಅವರು ಕುಶಲಕರ್ಮಿಗಳೂ, ಸೃಜನಾತ್ಮಕರೂ, ಕಲ್ಪನಾಸಾಮರ್ಥ್ಯವುಳ್ಳವರೂ ಮತ್ತು ಸಮರ್ಥವಾಗಿ ಸಂವಹನ ಮಾಡಬಲ್ಲವರೂ ಆಗುವರಲ್ಲದೆ, ಒಂದು ಹೊಸ ಅನುಭವದ ವಿಶ್ವವನ್ನು ಶಿಕ್ಷಕರಿಗೆ ತೋರಿಸಬಲ್ಲರು. ಮಕ್ಕಳು ಸ್ವಭಾವತಃ ನಾಚಿಕೆಯುಳ್ಳ, ಸಿಡಿಮಿಡಿಗೊಳ್ಳುವ, ಸ್ನೇಹಪ್ರಿಯ, ಸಂತೋಷದಿಂದಿರುವ, ಚಟುವಟಿಕೆಯುಳ್ಳ ಅಥವಾ ಮಂಕಾಗಿ ಇರುವಂಥ ಭಾವನೆಯುಳ್ಳವರಾಗಿರುತ್ತಾರೆ. ಕೆಲವು ಮಕ್ಕಳು ತುಂಬಾ ಸೂಕ್ಷ್ಮಮತಿಗಳಾದರೆ ಇನ್ನೂ ಕೆಲವರು ಆ ರೀತಿ ಇರುವುದಿಲ್ಲ. ಮಕ್ಕಳು ವಿವಿಧ ಸ್ವಭಾವಗಳನ್ನು ಒಳಗೊಂಡಿರುತ್ತಾರೆ ಎಂಬುದನ್ನು ಗುರುತಿಸುವಲ್ಲಿ ಶಿಕ್ಷಕರು ಅನೇಕ ಬಾರಿ ವಿಫಲರಾಗುತ್ತಾರೆ. ಮಕ್ಕಳನ್ನು ಶಿಕ್ಷಿಸಲು ಮತ್ತು ಅವರಿಗೆ ಪಾಠ ಮಾಡಲು ಶಿಕ್ಷಕರು ಬಳಸುವ ವಿಧಾನ ಯಾವಾಗಲೂ ಒಂದೇ ರೀತಿಯದಾಗಿರುತ್ತದೆ. ಉದಾಹರಣೆಗೆ ಶಿಕ್ಷೆಯನ್ನು ಬೇರೆ ಬೇರೆ ಮಕ್ಕಳು ಬೇರೆ ಬೇರೆ ರೀತಿಯಾಗಿ ಪರಿಗಣಿಸಬಹುದು. ಶ್ಲಾಘಿಸುವುದರಿಂದ ಮಕ್ಕಳು ಹಸನ್ಮುಖರಾಗುತ್ತಾರೆ (ದೊಡ್ಡವರಂತೆಯೇ!) ಶಾಲೆಯಲ್ಲಿ ಉತ್ತಮ ಕಲಿಕೆಯ ವಿದ್ಯಾರ್ಥಿಯನ್ನಾಗಿ ಮಾಡಲು ಯಾವ ರೀತಿಯಲ್ಲಿ ವಾತಾವರಣವನ್ನು ನಿರ್ಮಾಣ ಮಾಡಬೇಕು? ಶಿಕ್ಷಕರು ತಾವು ಅನುಸರಿಸುತ್ತಿರುವ ಶಿಕ್ಷಣಕ್ರಮ ಸರಿಯಾಗಿದೆಯೇ ಎಂಬುದನ್ನು ಪುನರ್ ಪರೀಕ್ಷೆ ಮಾಡಿಕೊಳ್ಳಬೇಕು. ಉದಾಹರಣೆಗೆ, ಶಿಕ್ಷಕರು ಕಪ್ಪುಹಲಗೆಯ ಮೇಲೆ 'ಮಡಕೆ ಅಥವಾ ಹಣ್ಣಿನ' ಚಿತ್ರವನ್ನು ಬರೆದು ಅದನ್ನು ನಕಲು ಮಾಡಲು ಮಕ್ಕಳಿಗೆ ಹೇಳುತ್ತಾರೆ. ಹೀಗೆ ಮಾಡುವುದರಿಂದ ಯಾವ ಸೃಜನಶೀಲತೆಯು ಕಂಡುಬರುವುದಿಲ್ಲ, ಶಿಕ್ಷಕರಾಗಿ ನಿಮಗೆ ಇಲ್ಲದ ಸೃಜನಶೀಲತೆಯನ್ನು ಮಕ್ಕಳಿಗೆ ತಿಳಿಸುತ್ತಿದ್ದೀರಿ.

ಇದಕ್ಕೆ ಬದಲಾಗಿ, ನೀವು ಬೇರೆಯೇ ವಿಧಾನವನ್ನು ಏಕೆ ಪ್ರಯತ್ನ ಮಾಡಬಾರದು? ಮಕ್ಕಳ ಕೈಗೆ ಕಾಗದ, ಪೆನ್ಸಿಲ್ ಮತ್ತು ಬಣ್ಣಗಳನ್ನು (ಕ್ರೇಯಾನ್ಸ್ ಬಣ್ಣದ ಪೆನ್ಸಿಲ್‌ಗಳು) ಕೊಟ್ಟು ಅವರು ಈ ಕೆಳಗಿನ ಕೆಲಸಗಳನ್ನು ಮಾಡುವಂತೆ ಹೇಳಿ:



- ನಿಮಗೆ ಇಷ್ಟ ಬಂದುದನ್ನು ಬರೆಯಿರಿ
- ಹೂವು, ಮರ, ಯಾವುದೇ ವ್ಯಕ್ತಿ......
- ಶಾಲೆ, ಗ್ರಾಮ, ಮಾರುಕಟ್ಟೆ..
- ನಿಮ್ಮದೇ ಚಿತ್ರ, ಸ್ನೇಹಿತರು ಕುಟುಂಬದವರು.....

ಇಪ್ಪತ್ತು ಜನ ವಿದ್ಯಾರ್ಥಿಗಳಿರುವ ತರಗತಿಯಲ್ಲಿ 20 ವಿವಿಧ ಬಗೆಯ ಚಿತ್ರಗಳು ನಿಮಗೆ ದೊರೆಯುತ್ತವೆ. ಇವುಗಳು ಈ ಕೆಳಕಂಡಂತೆ ವಿಭಿನ್ನವಾಗಿರಬಹುದು.

- ಬಣ್ಣ
- ಮಾಹಿತಿ
- ಗಾತ್ರ
- ಸೌಂದರ್ಯ
- ಭಾವನೆಗಳನ್ನು ಆಲೋಚನೆಗಳನ್ನು ವ್ಯಕ್ತಪಡಿಸುವ ರೀತಿ

ಈ ವಿಧಾನದಲ್ಲಿ ಮಗು ತನ್ನ ಸ್ವಂತ ಕೌಶಲ್ಯ, ಆಲೋಚನೆ, ಕಲ್ಪನೆ, ಸೃಜಿಸುವ ಶಕ್ತಿ ಮತ್ತು ಭಾವನೆಗಳಿಂದ ಕೆಲಸಮಾಡುತ್ತದೆ. ಪಾರಂಪರಿಕ ಪದ್ಧತಿಯಲ್ಲಿ ಹೇಳಿಕೊಟ್ಟಿದ್ದನ್ನು ಮಗು ಯಾವ ರೀತಿ ನೋಡಿಕೊಂಡು ಬರೆಯುತ್ತದೆ ಹಾಗೂ ಗಮನಿಸುತ್ತದೆ. ಆದರೆ, ಹೊಸ ವಿಧಾನವು ಮಗುವಿನ ಆಂತರಿಕ ಪ್ರಪಂಚದ ಕಡೆ ಗಮನಹರಿಸುತ್ತದೆ, ಈ ಮಗುವಿನ ಚಟುವಟಿಕೆಗಳ ಫಲಿತಾಂಶವು ಯಾವಾಗಲೂ ನೈಜ, ಕೌಶಲ್ಯಪೂರ್ಣ ಅಥವಾ

ಕಲಾತ್ಮಕವಾಗಿರಬೇಕಾಗಿಲ್ಲ. ಮಗುವಿನ ಆಂತರಿಕ ಪ್ರಪಂಚ, ಕಾಲ ಮತ್ತು ಅನುಭವದಿಂದ ಪಕ್ವವಾಗುತ್ತಾ ಹೋಗುತ್ತದೆ ಇದರ ಜೊತೆಗೆ ನೀವು ಗಮನಿಸಬೇಕಾದ ವಿಷಯವೇನೆಂದರೆ, ಈ ಚಟುವಟಿಕೆಗಳಿಂದ ಮಗು ಸಂತೋಷಪಡುತ್ತದೆ. **ಮಗು ಹೀಗೆಯೇ ಮಾಡಬೇಕೆಂದು ಹೇಳದೆ ಇರುವುದಕ್ಕೆ ಶಿಕ್ಷಕರಿಗೆ ಆಂತರಿಕ ಶಿಸ್ತು ಬೇಕಾಗುತ್ತದೆ.** ಮಕ್ಕಳು ಆಟವಾಡುವ, ಮಾತನಾಡುವ ಮತ್ತು ಯಾವುದೇ ಸೃಜನಾತ್ಮಕ ಚಟುವಟಿಕೆಯಲ್ಲಿ ತೊಡಗುವ ಬಗ್ಗೆಯೂ ಇದು ಅನ್ವಯಿಸುತ್ತದೆ. ತನ್ನ ಸಂತೋಷವನ್ನು ತಾನು ಕಂಡುಕೊಳ್ಳುವ ಪ್ರಯತ್ನದಲ್ಲಿ ಮಗುವಿಗೆ ಸ್ವಾತಂತ್ರ್ಯವಿಲ್ಲ. ಉದಾಹರಣೆಗೆ, ನಾವು ಕಲಿಸುವ ವಿಧಾನದಲ್ಲಿ ಮಕ್ಕಳು ಅನುಕರಿಸುವ ಮತ್ತು ಕಂಠಪಾಠ ಮತ್ತು ನಕಲು ಹೊಡೆಯುವುದನ್ನು ಮಾಡುವುದನ್ನೇ ಉತ್ತೇಜಿಸಲಾಗುತ್ತದೆ. ಮಕ್ಕಳು ವಿಸ್ತಾರವಾಗಿ ಪಾಠಗಳನ್ನು ಗಂಟೆಗಟ್ಟಲೆ ಬರೆಯಬೇಕಾದ ಪದ್ಧತಿ ನಮ್ಮಲ್ಲಿ ಆಚರಣೆಯಲ್ಲಿದೆ. ಇದನ್ನು ಮಗು ಹೇಗೆ ತಾನೆ ಸಂತೋಷದಿಂದ ಸ್ವೀಕರಿಸಬಲ್ಲದು? ಈ ಕೆಲಸದಲ್ಲಿ ಕೈ ಬರಹಗಳ ಕೌಶಲ್ಯತೆ ಬೇಕಾಗುತ್ತದೆ. ಆದರೆ ಎಳೆಯ ವಯಸ್ಸಿನವರಲ್ಲಿ ಇದು ಇರುವುದಿಲ್ಲ. ಪದೇ ಪದೇ ತಿದ್ದಿ ಬರೆಯುವುದು ನಿಜವಾಗಿ ಮಕ್ಕಳಿಗೆ ಶಿಕ್ಷೆಯಾಗಿ ನಿಯಮಿಸಿದ (Imposition) ಕೆಲಸವಾಗುತ್ತದೆ.

ಉದಾಹರಣೆಗೆ: ಯಾವುದೇ ಭಾಷೆಯ ಅಕ್ಷರವನ್ನು ಗಮನಿಸಿದಾಗ ಅದರಲ್ಲಿ ವಿವಿಧ ಆಕಾರಗಳು ಒಳಗೊಂಡಿರುವುದನ್ನು ಕಾಣುತ್ತೇವೆ ಉದಾಹರಣೆಗೆ: ವೃತ್ತಗಳು, ಗೆರೆ, ಚುಕ್ಕೆ, ತ್ರಿಕೋಣಗಳು, ಅಡ್ಡಗೆರೆ ಇತ್ಯಾದಿ. ಮುಂದೆ ಮಗು ತಾನೇ ತಾನಾಗಿ ಚಿತ್ರಿಸುವ ಚಿತ್ರದಲ್ಲಿ ಇವುಗಳಲ್ಲಿ ಯಾವುದನ್ನಾದರೂ ಸುಲಭವಾಗಿ ಬಳಸಿಕೊಳ್ಳಬಹುದು. ಉದಾ: ಪರ್ವತಗಳ ಹಿಂದೆ ಸೂರ್ಯೋದಯ ಜೊತೆಗೆ ಮರಗಳು, ನದಿ ಈ ರೀತಿಯ ಚಿತ್ರವು ಮಕ್ಕಳ ಚಲನಾ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡುತ್ತವೆ. ಪ್ರತಿ ಚಿತ್ರ ರಚನೆಯಿಂದಲೂ ಬಣ್ಣದ ಪೆನ್ಸಿಲ್ ಅಥವಾ ಕುಂಚ/ಬ್ರಷ್‌ನ್ನು ಬಳಸುವ ವಿಧಾನದಲ್ಲಿ ಮಗು ಸುಧಾರಣೆಯನ್ನು ಕಂಡುಕೊಳ್ಳುತ್ತದೆ. ಮಕ್ಕಳು ತಾವು ವಾಸ್ತವವಾಗಿ ಬರೆಯಬೇಕಾದುದನ್ನು ಪ್ರಾರಂಭಿಸುವುದಕ್ಕಿಂತ ಮುಂಚಿತವಾಗಿ ಸಂತೋಷದಿಂದ ಮೂಲ ಕೌಶಲ್ಯಗಳನ್ನು ಕಲಿತುಕೊಳ್ಳುತ್ತಾರೆ.

ಮಕ್ಕಳು ಸರಿಯಾಗಿ ಮಾತನಾಡುವುದಿಲ್ಲ ಅಥವಾ ಪ್ರಶ್ನೆಗಳಿಗೆ ಉತ್ತರಿಸುವುದಿಲ್ಲ ಎಂಬುದಾಗಿ ಆಗಾಗ ಶಿಕ್ಷಕರು ದೂರುತ್ತಾರೆ. ಕೆಲವು ವೇಳೆ ಮಗು ಕಲಿಯುತ್ತಿರುವ ಶಿಕ್ಷಣ ಮಾಧ್ಯಮದ ಭಾಷೆ, ಮಾತೃಭಾಷೆ ಬೇರೆ ಬೇರೆಯಾಗಿರುತ್ತವೆ. ಶಿಕ್ಷಕರು ಎದುರು ನೋಡುವ ಉತ್ತರವನ್ನು ಕೊಡಲು ಮಕ್ಕಳು ತಮಗೆ ತಿಳಿದಿಲ್ಲವೆಂದು ಹೆದರುತ್ತಾರೆ. ಆದರೆ, ಅವರು 'ಅಂತ್ಯಾಕ್ಷರಿ'ಯಂಥ ಆಟಗಳನ್ನು ಆಡುವಾಗ ಬಹಳ ಆರಾಮವಾಗಿ ಮಾತನಾಡಬಲ್ಲರು. ಈ ರೀತಿಯಾಗಿ ಅವರು ಹೇಳಬಲ್ಲರು.

- ಪರಿಸರದಲ್ಲಿ/ಚಿತ್ರದಲ್ಲಿ ಕಾಣುವ ವಸ್ತುಗಳ ಹೆಸರುಗಳು
- ಹಣ್ಣು, ತರಕಾರಿ, ಪ್ರಾಣಿಗಳ ಹೆಸರುಗಳು
- ಯಾವುದೇ ನಿಗದಿತ ಅಕ್ಷರದಿಂದ ಪ್ರಾರಂಭವಾಗುವ ವಸ್ತುಗಳ ಹೆಸರುಗಳು

ಮಕ್ಕಳಿಗೆ ಕಥೆ ಹೇಳುವುದರ ಮೂಲಕ, ಅಭಿನಯದ ಮೂಲಕ, ಹಾಡು ನೃತ್ಯಗಳ ಮೂಲಕ ಉತ್ತೇಜನ ಕೊಡಬಹುದು.

ಈ ಎಲ್ಲ ಚಟುವಟಿಕೆಗಳನ್ನು ಮಾಡಲು ಮಕ್ಕಳಿಗೆ ಪಾಠ ಹೇಳಬೇಕಾಗಿಲ್ಲ. ಅವರೇ ಮಾಡುತ್ತಾರೆ. ಪ್ರಯೋಗ ಮಾಡಲು ಮತ್ತು ಸೃಜನಾತ್ಮಕವಾಗಿರಲು ಸ್ವಾತಂತ್ರ್ಯ ಕೊಟ್ಟುನೋಡಿ, ಅವರ ಸಾಧನೆಯನ್ನು ಕಂಡು ನೀವು ಬೆರಗಾಗುವಿರಿ. ನಮ್ಮ ಸಂಶೋಧನೆಗಳ ಮೂಲಕ ನಾವು ಕಂಡುಕೊಂಡುದೆಂದರೆ ಮಕ್ಕಳು ಕಲೆ, ಕುಶಲ ಕ್ರೀಡೆ, ಕಥೆಗಳ ಮೂಲಕ ಮಕ್ಕಳು ತಮ್ಮ ಎಲ್ಲ ಶೈಕ್ಷಣಿಕ ಕೌಶಲ್ಯಗಳನ್ನು ಕಲಿತುಕೊಳ್ಳುತ್ತಾರೆ. ಪಾರಂಪರಿಕ ಶಿಕ್ಷಣ ಪದ್ಧತಿ ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಹೆಚ್ಚಿನ ಕಾಣಿಕೆ ಕೊಡುವುದಿಲ್ಲ. ಆದರೆ ಕ್ರೀಡೆಗಳ ಮೂಲಕ ಕಲಿಯುವ




ಮಗು ಸರ್ವಶಕ್ತವಾಗಿ ಬೆಳೆಯುತ್ತದೆ. ಸಂತೋಷದಾಯಕ ಕಲಿಕೆಯ ಬಗ್ಗೆ ಎಲ್ಲ ಶಿಕ್ಷಕರಿಗೆ ಎಂದಾದರೂ ಆ ಪದ್ಧತಿ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಯಾರೂ ತಿಳಿದಿಲ್ಲ. ಏಕೆಂದರೆ ಅವರು ನಿಜವಾಗಿ ಅದನ್ನು ಕಂಡಿಲ್ಲ. ಈ ವಿಧಾನಗಳನ್ನು ಬಳಸುವುದಾದರೆ, ಅನೇಕ ಬಡ ಜನಾಂಗಗಳಲ್ಲಿ ಕೊಳಗೇರಿ ಪ್ರದೇಶಗಳ, ಹರಿಜನ ಗಿರಿಜನ, ಮಕ್ಕಳ ಸೃಜನಾತ್ಮಕ ಮತ್ತು ಕಲಿಕಾ ಸಾಮರ್ಥ್ಯ ಅಚ್ಚರಿ ಮೂಡಿಸುತ್ತದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಪ್ರಚಲಿತವಿರುವ ಮಕ್ಕಳ ಅಭಿವೃದ್ಧಿ ವಿಧಾನಗಳು ಮತ್ತು ನಗರ ಮತ್ತು ಗ್ರಾಮೀಣ ಪ್ರದೇಶಗಳ ಸರಕಾರಿ ಶಾಲೆಗಳಲ್ಲಿ ನಾವೇ ಮಾಡಿದ ಸಂಶೋಧನೆಯಿಂದ ತಿಳಿದುಬಂದಿರುವುದೆಂದರೆ, ಮಕ್ಕಳನ್ನೇ ಸಂಪನ್ಮೂಲ ವ್ಯಕ್ತಿಯಾಗಿ ಬಳಸಿಕೊಂಡು ಮಾಡುವ ಶಿಶು-ಸ್ನೇಹಿ ವಿಧಾನದಿಂದ ಮಕ್ಕಳ ಸರ್ವಾಂಗೀಣ, ಪರಿಪೂರ್ಣ/ಸಂಪೂರ್ಣ ಬೆಳವಣಿಗೆ ಸಾಧ್ಯ.

## ಮಕ್ಕಳಲ್ಲಿ ಕಾಣುವ ಸಾಮಾನ್ಯ ಮಾನಸಿಕ ಸಮಸ್ಯೆಗಳು

### ಗುರುತಿಸುವ ವಿಧಾನ

ಮಕ್ಕಳು ಬೆಳೆಯುತ್ತಿದ್ದ ಹಾಗೆ ಒಂದಲ್ಲ ಒಂದು ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಈ ಕೆಳಗಿನ ಲಕ್ಷಣಗಳು ಕಂಡುಬಂದಾಗ ಮಾತ್ರ ಅದನ್ನು ಅಸ್ವಸ್ಥತೆ ಎಂದು ಗಂಭಿರವಾಗಿ ಪರಿಗಣಿಸಬೇಕು.

- ಸಮಸ್ಯೆ ಬಹಳ ದಿನಗಳಿಂದ ಇರುವುದಾದರೆ
- ಸಮಸ್ಯೆ ತುಂಬ ಕಠಿಣ / ಹೆಚ್ಚಾಗಿದ್ದು ತಡೆಯಲು ಅಸಾಧ್ಯವಾದರೆ
- ಮಗುವಿಗೆ ಅಥವಾ ಸುತ್ತಮುತ್ತ ಇರುವವರಿಗೆ ಅಥವಾ ಎಲ್ಲರಿಗೆ ಇದರಿಂದ ತೊಂದರೆಯಾದರೆ
- ಶಾಲೆಯಲ್ಲಿ ಮಗು ಕಲಿಕೆಯಲ್ಲಿ ಹಿಂದುಳಿದರೆ

## ಕಾರಣಗಳೇನು?

ಮಗುವಿನಿಂದಾಗಿಯೇ ಅಥವಾ ಮಗು ಬೆಳೆಯುತ್ತಿರುವ ಪರಿಸರದಿಂದ ಸಮಸ್ಯೆ ಉದ್ಭವವಾಗಬಹುದು. ಮಗುವಿಗೆ ಸಂಬಂಧಪಟ್ಟ ಅಂಶಗಳೇನೆಂದರೆ.

- ಮಗುವಿನ ಸ್ವಭಾವ (ಬಹಳ ಭಯ, ಅತಿಯಾದ ಹೆದರಿಕೆ, ಕಡಿಮೆ ಗಮನ ಶಕ್ತಿ, ಮುನ್ನುಗ್ಗುವ ಸ್ವಭಾವ, ನಿರುತ್ಸಾಹ, ಅತಿಯಾದ ಚಟುವಟಿಕೆ ಇತ್ಯಾದಿ) ವನ್ನು ಹುಟ್ಟಿನಿಂದ ಪಡೆದಿರುವುದು.
- ಬುದ್ಧಿವಂತಿಕೆಯ ಮಟ್ಟ
- ಜ್ಞಾನೇಂದ್ರಿಯಗಳ ಕೆಲಸದ ಕೊರತೆ (ಕಿವಿ, ದೃಷ್ಟಿ ಮಂದವಾಗಿರುವುದು)
- ಕೈಕಾಲು ಚಲನೆಯಲ್ಲಿ ಕೊರತೆ (ಕೈ, ಕಾಲುಗಳ ಶಕ್ತಿಹೀನತೆ ಅಥವಾ ಚಲನವಲನಗಳ ಕಡಿಮೆ ಚುರುಕುತನ ಅಥವಾ ದೈಹಿಕ-ಮಾನಸಿಕ ಹೊಂದಾಣಿಕೆಯಲ್ಲಿ ತೊಂದರೆ)
- ಬೆಳವಣಿಗೆಯಲ್ಲಿ ಸುಮಾರಾದ, ಕಡಿಮೆ ಅಥವಾ ಕುಂಠಿತ ಬೆಳವಣಿಗೆ. (ಚಲನವಲನಗಳಲ್ಲಿ ಮತ್ತು ಭಾಷೆಯಲ್ಲಿ)
- ದೀರ್ಘಕಾಲದ ದೈಹಿಕ ಅನಾರೋಗ್ಯ

## ಪರಿಸರಕ್ಕೆ ಸಂಬಂಧಪಟ್ಟ ಅಂಶಗಳು:

ಕುಟುಂಬ
- ಜಗಳವಾಡುವ ತಾಯಿ-ತಂದೆಯರು
- ಅತ್ಯಂತ ಮಹತ್ವಾಕಾಂಕ್ಷೆಯುಳ್ಳ, ಅತಿಯಾಗಿ ರಕ್ಷಣೆ ಮಾಡುವ
- ಅನ್ಯಮನಸ್ಕ ಅಥವಾ ಅಲಕ್ಷ್ಯ ಮನೋಭಾವದ
- ಅತಿಯಾಗಿ ಶಿಸ್ತು ಅಥವಾ ಶಿಕ್ಷೆ ಕೊಡುವ
- ತಂದೆ-ತಾಯಿಯರು ತಾರತಮ್ಯ ತೋರಿಸುವುದು
- ಒಡಹುಟ್ಟಿದವರೊಡನೆ ಪೈಪೋಟಿ, ಸಿಟ್ಟು ಮತ್ತು ಅಸೂಯೆ

ಸಾಮಾಜಿಕ ಪರಿಸರ
- ಬಡತನ ಮತ್ತು ಸಾಮಾಜಿಕ ಸಮಸ್ಯೆಗಳು (ಜಾತಿ ಸಂಬಂಧ ಅಥವಾ ಧರ್ಮಕ್ಕೆ ಸಂಬಂಧಿಸಿದ)
- ವಿವಿಧ ಸಾಮಾಜಿಕ ಸ್ತರದ ನೆರೆ ಹೊರೆಯವರು
- ಸಮಾಜ - ವಿರೋಧಿ ಚಟುವಟಿಕೆ ಪ್ರವೃತ್ತಿಯುಳ್ಳ ಸ್ನೇಹಿತರ ಪಂಗಡ
- ಸಾಮಾಜಿಕವಾಗಿ ಯಾರೊಡನೆಯೂ ಬೆರೆಯದ ಸ್ವಭಾವ

ಶಾಲೆ
- ಶಾಲೆಯಲ್ಲಿ ಇರುವ ಕನಿಷ್ಠ ಶಾಲಾ ವ್ಯವಸ್ಥೆ, ಶಿಕ್ಷಕರು ಮತ್ತು ಇತರ ಮಕ್ಕಳಿಂದಾಗಿ ಸಮಸ್ಯೆ ಉಂಟಾಗಬಹುದು
- ತಾಯಿ-ತಂದೆಯರಂತೆಯೇ ಅಲಕ್ಷ್ಯ ಮಾಡುವ, ಶಿಕ್ಷೆ ಕೊಡುವ ಅಥವಾ ಅನ್ಯ ಮನಸ್ಕರಾದ ಶಿಕ್ಷಕರು
- ಇತರ ಶಿಕ್ಷಕರು ತಮ್ಮ ಖಾಸಗಿ ಸಮಸ್ಯೆಗಳಿಂದ ಸರಿಯಾದ ಕ್ರಮದಲ್ಲಿ ಪಾಠ ಮಾಡದೆ ಮಕ್ಕಳು ಅಥವಾ ಶಾಲೆಯ ಮೂಲಭೂತ ಸೌಕರ್ಯಗಳ ಬಗ್ಗೆ ದೂರುವುದು.

ಇತರ ಮಕ್ಕಳು
- ಹೆದರಿಕೊಳ್ಳುವ, ಅಶಕ್ತ/ನಿಶ್ಯಕ್ತ ಸಣ್ಣ ಮಕ್ಕಳನ್ನು ಅಥವಾ ಹೆಣ್ಣು ಮಕ್ಕಳನ್ನು ಚುಡಾಯಿಸುವವರು
- ಶಿಕ್ಷಕರೊಡನೆ ಸೇರಿಕೊಂಡು ಮಕ್ಕಳನ್ನು ಶಿಕ್ಷಿಸುವುದು
- ಕೆಳಜಾತಿಯವರು, ಬಡವರು, ಹೆಣ್ಣು ಮಕ್ಕಳು ಅಥವಾ ವಿಕಲಾಂಗರು ಎಂಬ ಕಾರಣಕ್ಕೆ ಅವರನ್ನು ಯಾವುದಕ್ಕೂ ಸೇರಿಸಿಕೊಳ್ಳದೇ ಇರುವುದು.

## ಕಾರಣಗಳು ಒಂದಲ್ಲ – ಹಲವು

ಮನೆಯಲ್ಲಿ ಒಳ್ಳೆಯ ವಾತಾವರಣವಿಲ್ಲದಿದ್ದಾಗ ಹಾಗೂ ಮಗುವಿಗೆ ನಾಚಿಕೆ ಸ್ವಭಾವವಿದ್ದಾಗ ಸಾಮಾನ್ಯವಾಗಿ ಆ ಮಗುವಿಗೆ ಶಾಲೆಯಲ್ಲಿ ಯಾವುದೇ ಮಿತ್ರರು ಇಲ್ಲದಿರಬಹುದು. ಶಿಕ್ಷಕರು ಹಾಗೂ ತರಗತಿಯ ಇತರ ಮಕ್ಕಳು ಮಗುವನ್ನು ಪೆದ್ದ ವಿಧ್ಯಾರ್ಥಿಯೆಂದು ಪರಿಗಣಿಸಿ ಗೇಲಿ ಮಾಡಬಹುದು. ಈ ಮಗುವು ಶಾಲೆಯಲ್ಲಿ ಹಿಂದುಳಿದರೆ ಮೇಲೆ ಹೇಳಿದ ಎಲ್ಲಾ ಅಂಶಗಳು ಅಂದರೆ, ಮಗುವಿನ ಸ್ವಭಾವ, ಮನೆಯ ವಾತಾವರಣ, ಶಾಲೆಯ ತೊಂದರೆಗಳು ಎಲ್ಲವೂ ಕಾರಣವಾಗುತ್ತವೆಯೆಂದು ತಿಳಿಯಬೇಕು. ಆ ಮಗುವು ಶಾಲೆಯಲ್ಲಿ ಹಿಂದುಳಿದಿರುವಿಕೆಗೆ **ಅನೇಕ ಕಾರಣಗಳಿವೆ.** ಇನ್ನೊಂದು ಉದಾ: ನಾವು ನೋಡಿರುವ ಒಂದು ಕುಟುಂಬದಲ್ಲಿ ತಂದೆ ಕುಡುಕನಾಗಿದ್ದು ಹೆಂಡತಿಯನ್ನು ಹೊಡೆಯುತ್ತಿರುತ್ತಾನೆ. ತಾಯಿಯು ಕೂಲಿ ಮಾಡಿ ಸಂಸಾರಕ್ಕೆ ಸಹಾಯ ಮಾಡುತ್ತಿರುತ್ತಾಳೆ. ಆ ಕುಟುಂಬಕ್ಕೆ ಮೂರು ಮಕ್ಕಳಿವೆ. ಅವರಲ್ಲಿ ದೊಡ್ಡವನ ಸ್ವಭಾವ ಎಂದರೆ ಅವನು ಆಕ್ರಮಣಶೀಲನಾಗಿ ಸಹಪಾಠಿಗಳೊಡನೆ ಜಗಳ ಕಾಯುತ್ತಾನೆ, ಓದುವುದಿಲ್ಲ; ಎರಡನೆಯವನಿಗೆ ಶಾಲೆಯಲ್ಲಿ ಮಿತ್ರರಿದ್ದಾರೆ. ಚೆನ್ನಾಗಿ ಓದುತ್ತಾನೆ ಮತ್ತು ಶಾಲೆಯಲ್ಲಿ ತನ್ನ ಮಿತ್ರವೃಂದದಲ್ಲಿ ಬಹಳ ಜನಪ್ರಿಯ. ಮೂರನೆಯ ವ್ಯಕ್ತಿ ಎಂದರೆ ಬಹಳ ಸೌಮ್ಯವಾದ, ಚಿಂತೆ ಮಾಡುವ ಆತಂಕ ಸ್ವಭಾವದ ಹೆಣ್ಣು ಮಗುವಾಗಿದ್ದು, ಸದಾ ಮನೆಯ ಸಮಸ್ಯೆಗಳ ಬಗ್ಗೆಯೇ ಆಲೋಚನೆ ಮಾಡುತ್ತಿರುವುದು. ಈ ಮಗು ವಿದ್ಯಾಭ್ಯಾಸದಲ್ಲಿ ಹಿಂದುಳಿದಿದೆ. ಇವರೆಲ್ಲರೂ ಅನುವಂಶೀಕತೆಯನ್ನು, ಮನೆ ಮತ್ತು ಶಾಲೆ ವಾತಾವರಣವನ್ನು ಸಮನಾಗಿ ಹಂಚಿಕೊಳ್ಳುತ್ತಿರುವವರು.

## ಆದಾಗ್ಯೂ ಅವರೆಲ್ಲ ಯಾಕೆ ಭಿನ್ನರಾಗಿದ್ದಾರೆ ?ವಿವಿಧರು ಏಕೆ?

- ದೊಡ್ಡ ಹುಡುಗ ತನ್ನ ತಂದೆಯಿಂದ ಕೆಲವು ತೊಂದರೆಗಳುಳ್ಳ ಸ್ವಭಾವಗಳನ್ನು ಪಡೆದುಕೊಂಡಿದ್ದು, ಇದರಿಂದ ತನ್ನ ತಂದೆಯ ಸ್ವಭಾವವನ್ನು ಅನುಕರಿಸುತ್ತಾನೆ.
- ಕಿರಿಯ ಹುಡುಗಿಯು ತನ್ನ ತಾಯಿಯ ನಿಧಾನ ಪ್ರವೃತ್ತಿಯನ್ನು ಬೆಳೆಸಿಕೊಂಡು ಆಕೆಯಂತೆಯೇ ವರ್ತಿಸುತ್ತಾಳೆ
- ಮನೆಯಲ್ಲಿ ಒಳ್ಳೆಯ ವಾತಾವರಣವಿಲ್ಲದಿದ್ದರೂ, ಉತ್ತಮ ಸ್ವಭಾವವನ್ನು ಹೊಂದಿರುವ ಎರಡನೆಯ ಹುಡುಗನು ಮಾನಸಿಕವಾಗಿ ಉತ್ತಮ ಆರೋಗ್ಯವುಳ್ಳವನಾಗಿದ್ದಾನೆ.

## ಬಾಲ್ಯಾವಸ್ಥೆಯ ಸಾಮಾನ್ಯ ಮಾನಸಿಕ ಸಮಸ್ಯೆಗಳು

ಇವುಗಳನ್ನು ಈ ಕೆಳಗಿನಂತೆ ವಿವರಿಸಬಹುದು:

- ಮಕ್ಕಳಲ್ಲಿ ಕಂಡುಬರುವ ಮಾನಸಿಕ ಸಮಸ್ಯೆಗಳು ಸಾಮಾನ್ಯವಾಗಿ ಮಕ್ಕಳಿಂದ ಅಥವಾ ಪರಿಸರದಿಂದಲೂ ಬರಬಹುದು.

ಈ ಕಾಯಿಲೆಗಳಿಂದ ಮಗುವಿಗೆ ಅಥವಾ ಇತರರಿಗೆ ತೊಂದರೆ ಆಗಬಹುದು. ಬಹಳ ಚಿಕ್ಕ ವಯಸ್ಸಿನ ಮಕ್ಕಳಲ್ಲಿ ಈ ಸಮಸ್ಯೆಗಳನ್ನು ಕಾಣಬಹುದು.

- ➢ **ನಡವಳಿಕೆಯ ಕಾಯಿಲೆಗಳು (ಇತರರಿಗೆ ತೊಂದರೆಯಾಗುವ ನಡತೆಗಳು)**
  - ಅತಿಯಾದ ಚಟುವಟಿಕೆ
  - ದುಡುಕುತನ
  - ಗಮನ ಕೊಡಲು ಅಸಾಧ್ಯವಾಗುವುದು




- ➢ **ಸ್ವಲ್ಪ ವಯಸ್ಸಾಗುತ್ತಿದ್ದಂತೆ ಮಕ್ಕಳಲ್ಲಿ ಈ ಕೆಳಗಿನ ನಡವಳಿಕೆಗಳು ಕಾಣಿಸಿಕೊಳ್ಳಬಹುದು**
  - ಹಠಮಾರಿತನ

- ಚಂಡಿ ಹಿಡಿಯುವಿಕೆ
- ಹೊಡೆದಾಡುವಿಕೆ
- ಹೆದರಿಸುವುದು
- ಸುಳ್ಳು ಹೇಳುವುದು
- ಕಳ್ಳತನ ಮಾಡುವುದು
- ವಸ್ತುಗಳನ್ನು ಹಾಳು ಮಾಡುವುದು
- ತೊಂದರೆ ಪಡಿಸುವುದು
- ಉದ್ದೇಶಪೂರ್ವಕವಾಗಿ ಶಾಲೆಗೆ ಹೋಗದಿರುವುದು

➢ **ಭಾವನಾತ್ಮಕ ಕಾಯಿಲೆಗಳು (ಮಗುವಿಗೆ ತೊಂದರೆಯಾಗುವ ನಡತೆಗಳು)**

- ನಾಚಿಕೆ ಸ್ವಭಾವ
- ಹೆದರಿಕೆ (ಭಯ)
- ಆತಂಕ (ಕಳವಳ)
- ಅತಿಯಾದ ಸೂಕ್ಷ್ಮತೆ
- ಸ್ನೇಹಿತರನ್ನೇ ಮಾಡಿಕೊಳ್ಳದಿರುವುದು
- ಮೌನಿಯಾಗಿರುವುದು
- ದುಃಖದಿಂದಿರುವುದು / ಯಾರ ಜೊತೆ ಸೇರದಿರುವುದು
- ಶಾಲೆಗೆ ಹೋಗಲೊಲ್ಲೆ ಎನ್ನುವುದು
- ಸುಲಭವಾಗಿ ಅಳುವುದು

➢ **ಒತ್ತಡಕ್ಕೆ ಸಂಬಂಧಿಸಿದ ದೈಹಿಕ ತೊಂದರೆಗಳು**

- ಹೊಟ್ಟೆನೋವು
- ತಲೆನೋವು
- ವಾಂತಿ ಮಾಡಿಕೊಳ್ಳುವುದು
- ಉಬ್ಬಸ (ಗೂರಲು) ಆಸ್ತಮಾ
- ಇತರ ದೈಹಿಕ ತೊಂದರೆಗಳು

➢ **ಬೆಳವಣಿಗೆಯಲ್ಲಿ ನಿಧಾನ, ಉದಾ:**

- ನಿಧಾನವಾದ ಇಲ್ಲವೆ ಅತಿ ಕಡಿಮೆ ವಾಕ್ ಮತ್ತು ಭಾಷೆ ಬೆಳವಣಿಗೆ
- ತೊದಲುವಿಕೆ / ಉಚ್ಛಾರಣೆಯ ದೋಷ

ಮಗುವಿಗೆ ಮಾತನಾಡಿದ ಭಾಷೆ ಅರ್ಥವಾಗುತ್ತದೆಯೇ ಎಂಬುದನ್ನು ಪರಿಶೀಲಿಸಬೇಕು. ಮಾತು ಮತ್ತು ಭಾಷಾ ಕೌಶಲ್ಯಗಳನ್ನು ಕಲಿಯುವಲ್ಲಿ ಮಕ್ಕಳಲ್ಲಿ ವ್ಯತ್ಯಾಸ ಇರುತ್ತದೆ. ಕೆಲವರು ಒಂದು ವರ್ಷದ ಒಳಗೆ ಮಾತನಾಡುತ್ತಾರೆ. ಇನ್ನು ಕೆಲವು ಮಕ್ಕಳು 5ನೇ ವರ್ಷದಲ್ಲಿ ಸ್ಪಷ್ಟವಾಗಿ ಮಾತನಾಡುತ್ತಾರೆ. ಆರು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಲ್ಲಿ ಮಾತನಾಡುವ ಅಥವಾ ಉಚ್ಛಾರಣೆಯ ತೊಂದರೆ ಸಾಮಾನ್ಯವಾಗಿ ಕಂಡುಬರುತ್ತದೆ. ಮಕ್ಕಳು ತೊದಲುವುದಕ್ಕೆ ಕಾರಣ ಅವರ ತಪ್ಪಾದ ಕಲಿಯುವಿಕೆ, ಇದಕ್ಕೆ ಚಿಕಿತ್ಸೆಕೊಡಿಸಬಹುದು. ಮೇಲಿನ ಯಾವುದೇ ತೊಂದರೆಗಳು ಐದು ವರ್ಷಗಳ ನಂತರವೂ ಇದ್ದರೆ ವಾಕ್‌ಶ್ರವಣ ತಜ್ಞರ ಸಲಹೆಯನ್ನು ಪಡೆಯಬೇಕು.

➢ **ಶಾಲೆ ಅಥವಾ ಮನೆಯಲ್ಲಿ ಮಗು ಬಟ್ಟೆಯಲ್ಲಿ ಒದ್ದೆ ಮಾಡಿಕೊಳ್ಳುವುದು (ಉಚ್ಚೆ ಮಾಡುವುದು)**

- ಮಕ್ಕಳು ಚಿಕ್ಕವರಿದ್ದಾಗ

- ಹೆದರಿಕೊಂಡಾಗ
- ಮೂತ್ರ ತಡೆದುಕೊಳ್ಳುವ ಶಕ್ತಿ ಕಡಿಮೆ ಇದ್ದಾಗ (ಇದು ಅನುವಂಶಿಯವಾಗಿ ಬಂದಿರುತ್ತದೆ)

ಈ ಎಲ್ಲ ಸಂದರ್ಭಗಳಲ್ಲಿ ಮಕ್ಕಳು ಆಗಾಗ ಮೂತ್ರ ಮಾಡಿಕೊಳ್ಳುವುದು ಸಾಮಾನ್ಯ. ಇದಕ್ಕಾಗಿ ಶಿಕ್ಷಕರು ಮಕ್ಕಳನ್ನು ಶಿಕ್ಷೆಗೆ ಒಳಪಡಿಸದೆ, ಅವರನ್ನು ಶೌಚಾಲಯಕ್ಕೆ ಹೋಗಲು ಬಿಡಬೇಕು. ಮಗು ಆ ರೀತಿ ಬಟ್ಟೆಯನ್ನು ಒದ್ದೆ ಮಾಡಿಕೊಂಡಾಗ ಮಗುವನ್ನು ಅಪಮಾನಿಸುವುದು ಅಥವಾ ಶಿಕ್ಷೆಗೆ ಒಳಪಡಿಸುವುದು ತಪ್ಪು. ಇದೊಂದು ಕಾಯಿಲೆಯೇನಲ್ಲ, ಸ್ವಲ್ಪ ತರಬೇತಿಯ ನಂತರ ಮಗು ಸಮಸ್ಯೆಯಿಂದ ಪಾರಾಗುತ್ತದೆ.

➢ **ಪಾಠದಲ್ಲಿ ಹಿಂದೆ / ಓದಿನ ಸಮಸ್ಯೆಗಳು / ಶಾಲೆಯಲ್ಲಿ ಹಿಂದುಳಿದಿರುವಿಕೆ**

ಇದಕ್ಕೆ ಈ ಕೆಳಗಿನ ಕಾರಣಗಳು ಇರಬಹುದು

- ಶಾಲಾ ಪದ್ಧತಿಯಲ್ಲಿ ಕೊರತೆ ಮತ್ತು ಬೋಧನ ಕ್ರಮದಲ್ಲಿ ದೋಷಗಳು
- ಮಗುವಿನ ಮಾತೃಭಾಷೆಯೂ ಶಿಕ್ಷಣದ ಮಾಧ್ಯಮವೂ ಬೇರೆ ಬೇರೆಯಾಗಿದ್ದು ಮಗುವು ಕಲಿಯುವಿಕೆ ತೊಂದರೆಯನ್ನು ಎದುರಿಸುತ್ತಿರುವುದು
- ಪಂಚೇಂದ್ರಿಯಗಳ ಅಸಮರ್ಥತೆ
- ಬುದ್ಧಿಮಾಂದ್ಯತೆ
- ಗಮನ ಶಕ್ತಿಯ ತೊಂದರೆ
- ಮನೆಯ ಹಲವು ಕೆಲಸಗಳಿಗೆ ಮಗುವಿನ ನರವು ಬೇಕಾಗಿದ್ದು, ಇದರಿಂದ ಶಾಲೆಯ ಹಾಜರಾತಿ ಕಡಿಮೆ
- ಈ ಹಿಂದೆ ವಿವರಿಸಿದ ಮಾನಸಿಕ ತೊಂದರೆಗಳು
- ನಿರ್ದಿಷ್ಟ ಕಲಿಕೆಯ ತೊಂದರೆಗಳು (Specific Learning Disabilities (SLD))

ನಿರ್ದಿಷ್ಟ ಕಲಿಕೆಯ ತೊಂದರೆಗಳ ಬಗ್ಗೆ ವಿಶೇಷವಾಗಿ ಹೇಳಬೇಕಾಗುತ್ತದೆ. ಮಗುವಿಗೆ ಮೇಲಿನ ಯಾವುದೇ ಸಮಸ್ಯೆಗಳು ಇಲ್ಲದೆ ಸಾಮಾನ್ಯ ಬುದ್ಧಿವಂತಿಕೆ ಇದ್ದು ಓದುವುದು, ಬರೆಯುವುದು ಮತ್ತು ಗಣಿತ ಒಂದರಲ್ಲೇ ಅಥವಾ ಇವೆಲ್ಲವುಗಳು ಸೇರಿದ ತೊಂದರೆ ಇದ್ದರೆ ನಿರ್ದಿಷ್ಟ ಕಲಿಕೆಯ ತೊಂದರೆ ಎನ್ನುತ್ತೇವೆ. ಇಂಥಾ ಸಂದರ್ಭಗಳಲ್ಲಿ ಮಕ್ಕಳಿಗೆ ಅವರ ತರಗತಿಯ ಪಾಠದ ಹೊರೆ ಹೊರಿಸದೆ ಅವರು ಓದುತ್ತಿರುವ ತರಗತಿಗಿಂತ ಕೆಳಗಿನ ಮೂರು ತರಗತಿಯ ಪಾಠದಲ್ಲಿ ತಯಾರು ಮಾಡಬೇಕಾಗುತ್ತದೆ. ಈ ಮಕ್ಕಳಿಗೆ ೧೦ನೇ ತರಗತಿಯ ಪರೀಕ್ಷೆಗೆ ನೆರವಾಗುವಂತೆ ಅನೇಕ ಸೌಲಭ್ಯಗಳನ್ನು ಕರ್ನಾಟಕ ಸರ್ಕಾರ ನೀಡುತ್ತಿದೆ.

## ಮಾನಸಿಕ ತೊಂದರೆಗಳಿಗೆ ಏನು ಮಾಡಬೇಕು?

**ಮಗುವಿನ ಜೊತೆ ಹೀಗೆ ಮಾಡಿ:**

- ಮಗು ಹೇಳುವುದನ್ನು ಗಮನವಿಟ್ಟು ಕೇಳಿ,ಅದನ್ನು ತಡೆಯಬೇಡಿ
- ನಿಮ್ಮೊಡನೆ ಸ್ನೇಹದಿಂದಿದ್ದು ತಾನು ಹೇಳಬೇಕಾದುದನ್ನು ಹೇಳಲು ಮಗು ಅಂದುಕೊಂಡರೆ ಅದಕ್ಕೆ ಅವಕಾಶ ಕೊಡಿ. ಮಗುವಿನೊಡನೆ ನಿಮ್ಮ ಅತ್ಮೀಯ ಸಂಬಂಧವನ್ನು ಬೆಳೆಸಿಕೊಳ್ಳಿ
- ಮಗುವಿನ ಚಟುವಟಿಕೆಗಳಲ್ಲಿ ಮತ್ತು ಭಾವನೆಗಳ ಬಗ್ಗೆ ಆಸಕ್ತಿ ವಹಿಸಿರಿ
- ಮನೆಯಲ್ಲಿ ಮತ್ತು ಶಾಲೆಯಲ್ಲಿ ಮಗು ಯಾವ ಸಮಸ್ಯೆಯನ್ನು ಎದುರಿಸುತ್ತದೆ ಎಂಬುದನ್ನು ಪತ್ತೆಹಚ್ಚಿ
- ಸಮಸ್ಯೆಗಳಿಗೆ ಕಾರಣಗಳನ್ನು ತಿಳಿಯಲು ಪ್ರಯತ್ನಿಸಲು ಉತ್ತೇಜನ ಕೊಡಿ

- ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾದ ಮತ್ತು ಸರಳವಾದ ಮಾರ್ಗಗಳ ಬಗ್ಗೆ ಕೆಲಸ ಮಾಡಿ
- ಮಗುವಿನ ವಿಶೇಷ ಪ್ರತಿಭೆಗಳು ಮತ್ತು ಸಾಧನೆಗಳ ಬಗ್ಗೆ ಗಮನ ಕೊಡಿ. ಏಕೆಂದರೆ, ಇವುಗಳು ಮಗುವಿನ ಸ್ವಾಭಿಮಾನ ಮತ್ತು ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ.

**ಶಾಲೆಯಲ್ಲಿ**

ಸಮಸ್ಯೆಯು ಶಾಲೆಯೊಳಗೆ, ಶಿಕ್ಷಕರಲ್ಲಿ ಅಥವಾ ಇತರ ಮಕ್ಕಳೊಡನೆ ಅಥವಾ ಅಧ್ಯಯನಕ್ಕೆ ಸಂಬಂಧಿಸಿದುದಾದರೆ ಶಿಕ್ಷಕರು ಹಾಗೂ ವಿದ್ಯಾಸಂಸ್ಥೆಗಳ ಮುಖ್ಯಸ್ಥರು ಅಥವಾ ಇತರ ಮಕ್ಕಳು ಒಡಗೂಡಿ ಕೆಲಸ ಮಾಡಬೇಕಾಗುತ್ತದೆ.

- ಮಗುವಿನ ಪರವಾಗಿ ವಾದಿಸಿ, ತೊಂದರೆ ನಿವಾರಿಸಲು ಪ್ರಯತ್ನ ಮಾಡಿ.
- ತಂದೆ-ತಾಯಿಯರೊಡನೆ ಮಾತನಾಡುವುದರ ಮೂಲಕ ಸಮಸ್ಯೆಯನ್ನು ಬಗೆಹರಿಸುವುದು ಸಾಧ್ಯವೆ ನೋಡಿ.

## ಮಕ್ಕಳಲ್ಲಿ ಮೂರ್ಛೆ ಖಾಯಿಲೆ (ರೋಗ)

ಮಕ್ಕಳಲ್ಲಿ ಕೆಲವೊಮ್ಮೆ ಜಾಸ್ತಿ ಜ್ವರ ಬಂದಾಗ ಅಥವಾ ತಲೆಯ ಮೇಲೆ ಬಿಸಿ ನೀರಿನ ಸ್ನಾನ ಮಾಡಿಸಿದಾಗ, ಇನ್ನೂ ಕೆಲವೊಮ್ಮೆ ಏನೂ ಕಾರಣವಿಲ್ಲದೆ ಮೂರ್ಛೆ ರೋಗ ಬರುತ್ತದೆ. ಮೂರ್ಛೆ ರೋಗ ಎರಡು ಬಾರಿಗೂ ಹೆಚ್ಚುಸಲ ಬಂದಾಗ ಮೆದುಳಿನ ಮೇಲೆ ಹೆಚ್ಚಿನ ಪರಿಣಾಮ ಉಂಟಾಗುತ್ತದೆ. ಮೂರ್ಛೆ ರೋಗಕ್ಕೆ ಔಷಧಿಗಳಿದ್ದು ಅವು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಸಿಗುತ್ತವೆ. ಆದರೆ ಮೂರ್ಛೆ ಬಂದಾಗ ಕೈಯಲ್ಲಿ ಕಬ್ಬಿಣ ಕೊಡುವುದು ಬಾಯಲ್ಲಿ ಏನಾದರೂ ಇಡುವುದರಿಂದ ಉಪಯೋಗವಿಲ್ಲ. ಕೈಕಾಲುಗಳನ್ನು ಬಿಗಿಯಾಗಿ ಹಿಡಿಯುವುದರಿಂದ ಉಪಯೋಗವಿಲ್ಲ. ಮಲಗಿಸಿ ಉಸಿರು ಕಟ್ಟದ ಹಾಗೆ ನೋಡಿಕೊಂಡರೆ ಅಷ್ಟೇ ಸಾಕು. ಮಗುವನ್ನು ನರರೋಗ ತಜ್ಞರ ಹತ್ತಿರ ಅಥವಾ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯರ ಹತ್ತಿರ ಕಳುಹಿಸಬೇಕು.

## ಕಠಿಣ ನಡವಳಿಕೆಯ ತೊಂದರೆ ಇರುವ ವಿದ್ಯಾರ್ಥಿಗಳನ್ನು ತರಗತಿಯಲ್ಲಿ ನಿರ್ವಹಿಸುವುದು ಹೇಗೆ?

- ಮಗು ಗಮನ ಕೊಡಲು ಕಷ್ಟಪಡುವ ಹಾಗೂ ಅತೀ ಚಟುವಟಿಕೆಯ ಮಗುವಾದರೆ ಮಣಿಗೆ ದಾರ ಹಾಕುವುದು. ವಿವಿಧ ಧಾನ್ಯ, ಕಾಳುಗಳನ್ನು ಬೇರ್ಪಡಿಸುವುದು, ಅವುಗಳ ಆಕಾರ, ಬಣ್ಣ ಅಥವಾ ಗಾತ್ರದ ಆಧಾರದ ಮೇಲೆ ವಿಂಗಡಿಸಲು ಶಾಂತವಾಗಿರುವ ಸ್ಥಳದಲ್ಲಿ ಅವಕಾಶ ಮಾಡಿಕೊಡಿ.
- ಮಗು ಪ್ರತಿ ಕೆಲಸವನ್ನು ಮುಗಿಸಿದ ಮೇಲೆಯೂ ಮಗುವನ್ನು ಹೊಗಳಿ ಪ್ರೋತ್ಸಾಹ ಕೊಡಿ.
- ಮಗುವಿನ ವರ್ತನೆ ಹಾನಿಕಾರಕವಾದುದಾದರೆ, ಆ ರೀತಿಯ ವರ್ತನೆ ಶಿಕ್ಷಕರಿಗೆ ಮತ್ತು ಇತರರಿಗೆ ಒಪ್ಪಿಗೆಯಾಗತಕ್ಕದಲ್ಲವೆಂಬುದನ್ನು ವಿವರಿಸಿ ಹೇಳಿ. ಶಿಕ್ಷೆಯನ್ನು ಕೊಡಬೇಕಾದುದು ಅನಿವಾರ್ಯವಾದಾಗ, ಮೊದಲಿಗೆ ಮಗುವಿಗೆ ಆ ಬಗ್ಗೆ ತಿಳಿಸಿ ಇತರ ಮಕ್ಕಳೊಡನೆ ಈ ವಿಷಯವನ್ನು ಚರ್ಚಿಸಿ, ಇಂಥಾ ನಡವಳಿಕೆಯನ್ನು ನಿಯಂತ್ರಿಸುವುದು ಹೇಗೆಂದು ವಿಚಾರ ಮಾಡಿ, ಈ ರೀತಿಯ ಚರ್ಚೆಯಿಂದ ಹಲವು ಸಲಹೆಗಳು ಹೊರಬರುತ್ತವೆ.
- ಮಕ್ಕಳ ಹಾನಿಕಾರಕ ನಡತೆಗಳ ಬಗ್ಗೆ ಹೆಚ್ಚಿನ ಗಮನ ಕೊಟ್ಟಷ್ಟು ಈ ವರ್ತನೆಗಳು ಜಾಸ್ತಿ ಆಗಬಹುದು.
- ಮಗುವಿಗೆ ಗಮನ ಸಿಗದಂತಹ ಒಂದು ಮೂಲೆ ಅಥವಾ ಕೋಣೆಯೊಂದಕ್ಕೆ ಕಳುಹಿಸಿ. ಆದರೆ ಇದು ಬಹಳ ಕನಿಷ್ಠ ಸಮಯ ಅಂದರೆ ಮಗುವಿನ ವಯಸ್ಸಿನ ಒಂದು ವರ್ಷಕ್ಕೆ ಒಂದು ನಿಮಿಷದಂತೆ ಲೆಕ್ಕಾಚಾರ ಹಾಕಿರಿ. ಬಹಳ ಸಮಯ ಅಥವಾ ಅಪಾಯಕರ ಸ್ಥಳಗಳ ಕಡೆ ಮಗು ಹೋಗದಂತೆ ನಿಗಾ ವಹಿಸಬೇಕು.
- ಮಗುವನ್ನು ಶಿಕ್ಷಿಸಬೇಡಿ, ಆದರೆ ಧಾರಾಳವಾಗಿ ಪ್ರಶಂಸೆ ಮಾಡಿ.
- ಮಕ್ಕಳು ಶಾಲೆಯಲ್ಲಿ, ಮನೆಯಲ್ಲಿ ಮತ್ತು ತಮ್ಮೊಳಗೆ ಅನುಭವಿಸುವ ತೊಂದರೆ ಸಮಸ್ಯೆಗಳ ಬಗ್ಗೆ ಅವರೊಡನೆ ಗುಂಪು ಚರ್ಚೆಮಾಡಿ ಸಮಸ್ಯೆಯನ್ನು ಬಗೆಹರಿಸುವ ಪ್ರಯತ್ನ ಮಾಡಬಹುದು.

- ಸಮಸ್ಯೆಯನ್ನು ಬಗೆಹರಿಸುವ ಕೌಶಲ್ಯಗಳು ಉದಾಹರಣೆಗೆ: ಪರ್ಯಾಯ ಪರಿಹಾರಗಳ ಬಗ್ಗೆ ಅವುಗಳ ಅನುಕೂಲ, ಅನಾನುಕೂಲಗಳ ಬಗ್ಗೆ ಚರ್ಚಿಸಿ ಒಂದನ್ನು ಆರಿಸಿಕೊಂಡು ಪ್ರಯತ್ನಿಸಬಹುದು.

ಹದಿಹರೆಯದವರ ಸಮಸ್ಯೆಗಳು, ಬಹಳ ಜಟಿಲವಾಗಿದ್ದು ಅವುಗಳನ್ನು ಬೇರೆ ಬೇರೆ ರೀತಿಯಾಗಿ ನೋಡಬಹುದು. ಗಂಭೀರ ಸಮಸ್ಯೆಗಳಾದ ಮಾನಸಿಕ ಕಾಯಿಲೆಗಳು, ದುಃಖ ಖಿನ್ನತೆ ಮತ್ತು ಆತ್ಮಹತ್ಯೆಯ ಬೆದರಿಕೆಗಳು, ಕುಡಿಯುವಂತಹ ಚಟಗಳು ಮತ್ತು ಲೈಂಗಿಕ ಸಮಸ್ಯೆ ಕಾರಣವಾಗಿರಬಹುದು. ಆದರೆ ಹಸ್ತಮೈಥುನ, ಸಲಿಂಗಕಾಮ ಮತ್ತು ಹೆಣ್ಣುಗಂಡಿನ ಲೈಂಗಿಕ ಆಸಕ್ತಿಗಳನ್ನು ಅಸಹಜ ಎಂದು ಪರಿಗಣಿಸಬೇಕಾಗಿಲ್ಲ. ಇವುಗಳನ್ನು ಸಹಜವೆಂದೇ ತಿಳಿಯಬೇಕು ಮತ್ತು ಅದರ ಬಗ್ಗೆ ಸುಲಭವಾಗಿ ಮಾತನಾಡಬಹುದು. ಹದಿಹರೆಯದ ಹುಡುಗರು ಮತ್ತು ಹುಡುಗಿಯರು ಸಮಸ್ಯೆಗಳನ್ನು ಪ್ರತ್ಯೇಕವಾಗಿ ವಿಚಾರ ಮಾಡಬಹುದು. ಗ್ರಾಮೀಣ ಪ್ರೌಢಶಾಲೆಗಳಲ್ಲಿ ಜೀವನ ಕೌಶಲ್ಯಗಳ ಶಿಕ್ಷಣ, ಪಾತ್ರಾಭಿನಯ ಮತ್ತು ಸೂಕ್ಷ್ಮ ವಿಷಯಗಳನ್ನು ಭಯ ಅಥವಾ ಹಿಂಜರಿಕೆ ಇಲ್ಲದಂತೆ ಚರ್ಚಿಸಬೇಕು. ಲೈಂಗಿಕತೆಯ ಬಗ್ಗೆ ಮಾತನಾಡುವಾಗ ಮಾನವ ಸಂಬಂಧಗಳು, ಪ್ರೀತಿ ಭಾವನೆಗಳು, ಮೌಲ್ಯಗಳು ಮತ್ತು ಸಮಾಜದ ನಿರೀಕ್ಷೆಗಳನ್ನು ಗಮನದಲ್ಲಿರಿಸಿಕೊಳ್ಳಬೇಕು. ಸುರಕ್ಷಿತ ಲೈಂಗಿಕತೆಯ ಬಗ್ಗೆ ಗಮನ ಕೊಡಬೇಕು, ಏಕೆಂದರೆ ಏಡ್ಸ್ ನಂತಹ ಕಾಯಿಲೆಯಿಂದ ದೂರವಿರಬೇಕಾಗುವುದು ಹದಿಹರೆಯದವರಿಗೆ ಮುಖ್ಯ.

## ಅಂಗವಿಕಲತೆ, ಬುದ್ಧಿಮಾಂದ್ಯತೆ ಇರುವ ಮಕ್ಕಳು ಈ ಕೆಳಗಿನ ಯಾವುದೇ ವರ್ಗಕ್ಕೆ ಸೇರಿರಬಹುದು

- ಬುದ್ಧಿಮಾಂದ್ಯತೆ
- ದೃಷ್ಟಿಮಾಂದ್ಯ/ಸಮಸ್ಯೆಗಳು
- ಶ್ರವಣ ಮಾಂದ್ಯ ಸಮಸ್ಯೆಗಳು
- ಕೈಕಾಲುಗಳ ದೌರ್ಬಲ್ಯ

ಮಕ್ಕಳ ದೌರ್ಬಲ್ಯತೆ ಶೇ. 40ನ್ನು ಮೀರಿದರೆ, ಅಂಥಹ ಮಕ್ಕಳಿಗೆ ಗುರುತಿನ ಚೀಟಿಯನ್ನು ಕೊಡಲಾಗುತ್ತದೆ. ಆ ಚೀಟಿಯಿಂದ ಅವರು ವಿಶ್ರಾಂತಿ ವೇತನ (ಪಿಂಚಣಿ), ಪ್ರಯಾಣ ರಿಯಾಯಿತಿ, ಅವರ ತೊಂದರೆಗಳಿಗೆ ಸಹಾಯವಾಗುವ ಉಪಕರಣಗಳು ಮತ್ತು ಮುಂದೆ ಉದ್ಯೋಗ ಮೀಸಲಾತಿಗಳನ್ನು ಪಡೆದುಕೊಳ್ಳಬಹುದು. ತರಗತಿಯಲ್ಲಿ ಇಂತಹ ದುರ್ಬಲತೆ ಇರುವ ಮಕ್ಕಳಿದ್ದರೆ, ಗುರುತಿನ ಚೀಟಿಯನ್ನು ಪಡೆಯುವ ವಿಧಾನವನ್ನು ಶಿಕ್ಷಕರು ತಿಳಿದುಕೊಂಡಿದ್ದರೆ ಒಳ್ಳೆಯದು. ಈ ಮಕ್ಕಳನ್ನು ಅಂಗವಿಕಲತೆ ಇಲ್ಲದಿರುವ ಮಕ್ಕಳ ಜೊತೆ ತರಗತಿಯಲ್ಲಿ ಕೆಲವು ಸಮಯವಾದರೂ ಇರಿಸಬೇಕು.

ಇಂತಹ ದುರ್ಬಲತೆ ಹಾಗೂ ಅಸಮರ್ಥರಾದ ಮಕ್ಕಳನ್ನು ಶಾಲೆಯ ಮುಖ್ಯವಾಹಿನಿಗೆ ತರಬೇಕೆಂಬುದು ಸರ್ಕಾರದ ನಿಲುವು. ಮುಖ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿರುವ ಮಕ್ಕಳು ವಿಶೇಷ ಶಾಲೆಗಳಿಗೆ ಹೋಗಲು ಅವಕಾಶವಿಲ್ಲವಾದ ಕಾರಣ, ಈ ವ್ಯವಸ್ಥೆ ಆಗಬೇಕು.

## ಬುದ್ಧಿಮಾಂದ್ಯತೆ / ಅಂಗವಿಕಲತೆ ಇರುವ ಮಕ್ಕಳು ಇತರ ಮಕ್ಕಳು ಹೋಗುವ ಶಾಲೆಗಳಲ್ಲಿ ಪ್ರವೇಶ ಪಡೆಯುವುದು ಹೇಗೆ?

- ಇಂತಹ ಅಸಮರ್ಥ ಮಕ್ಕಳು ಶಾಲೆಗಳಲ್ಲಿ ಪಡುವ ತೊಂದರೆಗಳನ್ನು ಇತರ ಸಾಮಾನ್ಯ ಶಾಲೆಯ ಶಿಕ್ಷಕರು, ವಿದ್ಯಾರ್ಥಿಗಳು ಅರಿತುಕೊಳ್ಳಬೇಕು.
- ಸಾಮಾನ್ಯ ಮಕ್ಕಳು ಅಸಮರ್ಥ ಮಕ್ಕಳ ರೀತಿಯಲ್ಲಿ ನೋಡಲು, ಕೇಳಿಸಿಕೊಳ್ಳಲು ಅಥವಾ ನಡೆದಾಡಲು ಮತ್ತು ತರಗತಿಯಲ್ಲಿ ಕಲಿಯಲು, ಇತರ ಮಕ್ಕಳೊಡನೆ ಆಟವಾಡಲು ಎಷ್ಟು ತೊಂದರೆಯಾಗುತ್ತದೆ ಎಂಬುದನ್ನು ಅವರ ಸ್ಥಾನದಲ್ಲಿ ನಿಂತು ಅನುಭವಿಸಿ ತಿಳಿಯಬೇಕು.

- ಅಂಗವಿಕಲತೆ/ಬುದ್ಧಿಮಾಂದ್ಯತೆ ಇರುವ ಮಕ್ಕಳು ಬಾಳಲು ಹೇಗೆ ವಿವಿಧ ಕೌಶಲ್ಯಗಳನ್ನು ಕಲಿತುಕೊಳ್ಳುತ್ತಾರೆಂಬುದನ್ನು ಇತರ ಶಿಕ್ಷಕರು ಮಕ್ಕಳು ನೋಡಿ ಮೆಚ್ಚುವಂತೆ ಮಾಡಬೇಕು.
- ಇಂತಹ ಮಕ್ಕಳೊಡನೆ ಮಾತನಾಡುತ್ತ ಅವರ ಜೀವನ ರೀತಿಯ ಬಗ್ಗೆ ವಿಚಾರಿಸುತ್ತ ಅವರಿಗೆ ಅನುಭೂತಿ ತೋರಿಸಿ.
- ಈ ಮಕ್ಕಳನ್ನು ಶಾಲೆಯ ಎಲ್ಲ ಚಟುವಟಿಕೆಗಳಲ್ಲಿ ಭಾಗಿಯಾಗುವಂತೆ ಸಹಾಯ ಮಾಡಿ.

ಆ ಮಕ್ಕಳು ಇತರರಿಗಿಂತ ಹೇಗೆ ವಿಭಿನ್ನ ಎಂಬುದರ ಬಗ್ಗೆ ಕಥೆಗಳು, ಪಾತ್ರಾಭಿನಯ ಮತ್ತು ನಾಟಕಗಳ ಮೂಲಕ ಚರ್ಚೆ ಮಾಡಿ.

ಉದಾಹರಣೆಗೆ:
- ಹೆಣ್ಣು ಮಕ್ಕಳ ಬಗ್ಗೆ
- ಪರಿಶಿಷ್ಟ ಜಾತಿಗೆ ಸೇರಿದ ಮಕ್ಕಳ ಬಗ್ಗೆ
- ಪರಿಶಿಷ್ಟ ಪಂಗಡಕ್ಕೆ ಸೇರಿದ ಮಕ್ಕಳ ಬಗ್ಗೆ
- ಬುದ್ಧಿಮಾಂದ್ಯತೆ / ಅಂಗವಿಕಲತೆ ಇರುವ ಮಕ್ಕಳು

ಯಾವುದೇ ರೀತಿಯ ಭೇದ ಮಾಡುವುದರಿಂದ ಮಕ್ಕಳಿಗಾಗುವ ಮಾನಸಿಕ ವೇದನೆಯನ್ನು ಅರಿತುಕೊಳ್ಳಲು ಉಳಿದ ಮಕ್ಕಳಿಗೆ ಮನದಟ್ಟಾಗುವಂತೆ ಮಾಡಬೇಕು.

ಶಿಕ್ಷಕರು ಮತ್ತು ಮಕ್ಕಳು ತಮಗೆ ತಿಳಿಯದೆ ಅಥವಾ ತಿಳಿದೂ ಬುದ್ಧಿಮಾಂದ್ಯರ / ಅಂಗವಿಕಲ ಮಕ್ಕಳೊಡನೆ ಕ್ರೂರವಾಗಿ ವರ್ತಿಸುತ್ತ ಅವರ ಬಗ್ಗೆ ಸಹಾನುಭೂತಿ ಇಲ್ಲದೆ ಇರುವ ಸಾಧ್ಯತೆ ಇರುತ್ತದೆ. ಇಂಥಾ ಸಮಸ್ಯೆಗಳನ್ನು ಮುಕ್ತ ಚರ್ಚೆಯ ಮೂಲಕ ನ್ಯಾಯ ಮತ್ತು ಅನುಕಂಪದ ದೃಷ್ಟಿಯಿಂದ ಪರಿಹಾರ ಮಾಡಿಕೊಳ್ಳಬಹುದು.

## ಕೃತಜ್ಞತೆಗಳು

ಈ ಯೋಜನೆಯನ್ನು ಉತ್ತೇಜಿಸಿದ ಮತ್ತು ಈ ಪ್ರಕಟಣೆಗಳನ್ನು ಹೊರತರಲು ನೆರವಾದ ನಿಮ್ಹಾನ್ಸ್ ಸಂಸ್ಥೆಯ ಹಿಂದಿನ ನಿರ್ದೇಶಕರಾದ ಡಾ. ಎಂ ಗೌರೀದೇವಿಯವರಿಗೂ, ಹಾಗೂ ಈಗಿನ ನಿರ್ದೇಶಕರಾದ ಡಾ. ಬಿ.ಎನ್. ಗಂಗಾಧರ ಅವರಿಗೂ ನಮ್ಮ ಕೃತಜ್ಞತೆಗಳು. ಈ ನಮ್ಮ ಅಧ್ಯಯನ ಅತ್ಯಂತ ಫಲಪ್ರದವಾಗುವಂತೆ ಶ್ರಮಿಸಿದ ಕು. ಗೀತಾ, ಕು. ಚಂದ್ರಕುಮಾರಿ, ಶ್ರೀರಂಗ ನಾಯಕ್, ಶ್ರೀ ವೆಂಕಟೇಶ್, ಶ್ರೀ ಸಿದ್ಧನಾಯಕ್ ಮತ್ತು ಶಿಕ್ಷಕರು, ಮಕ್ಕಳಿಗೆಲ್ಲ ನಮ್ಮ ಕೃತಜ್ಞತೆಗಳು.

ಈ ಪುಸ್ತಕದಲ್ಲಿರುವ ರೇಖಾ ಚಿತ್ರಗಳನ್ನು ಬರೆದು ಒದಗಿಸಿದ ಡಾ. ಕೇಶವ ಕುಮಾರ್ ಅವರಿಗೆ ನಮ್ಮ ವಂದನೆಗಳು. ಗ್ರಾಮೀಣ ಸಂಸ್ಥೆಗಳ ರಾಷ್ಟ್ರೀಯ ಮಂಡಳಿ - ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ನವದೆಹಲಿ ಇವರಿಗೂ ನಮ್ಮ ಅಧ್ಯಯನದಲ್ಲಿ ಸಹಕರಿಸಿದ ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರವಿಜ್ಞಾನ ಸಂಸ್ಥೆಗೂ ನಮ್ಮ ವಂದನೆಗಳು.

ಮಾಲವಿಕಾ ಕಪೂರ್
ಉಮಾ. ಎಚ್.

# ಸಮರ್ಥತೆಯಿಂದ ಅಸಮರ್ಥತೆಯ ಗೆಲುವು

ಅಸಮರ್ಥತೆಯಿಂದ ಬದುಕುವುದು ಕಷ್ಟ ಆದರೆ ದೃಢ ವಿಶ್ವಾಸವುಳ್ಳವರು ತಮ್ಮ ಅಸಮರ್ಥತೆಯನ್ನು ಸವಾಲಾಗಿ ಸ್ವೀಕರಿಸಿ ತಮ್ಮ ಜೀವನದಲ್ಲಿ ಅಸಾಮಾನ್ಯ ಸಾಧನೆಯನ್ನು ಮಾಡುತ್ತಾರೆ. ಸಾರ್ವಜನಿಕರಲ್ಲಿ ಅಸಮರ್ಥತೆಯ ಬಗ್ಗೆ ಅರಿವು ಮೂಡಿಸುವ ಮತ್ತು ಅವರಲ್ಲಿ ವಿಶ್ವಾಸವನ್ನು, ಧೈರ್ಯವನ್ನು ತುಂಬುವ ದಿಸೆಯಲ್ಲಿ ಪ್ರತಿ ವರ್ಷ ಡಿಸೆಂಬರ್ 3ನ್ನು ವಿಶ್ವ ಅಸಮರ್ಥತೆ ದಿನವನ್ನಾಗಿ ಆಚರಿಸಲಾಗುತ್ತದೆ.

ಆಲ್ಫ್ರೆಡ್ ನೊಬೆಲ್ ಮತ್ತು ಹೆಲೆನ್‌ಕೆಲ್ಲರ್ ಅವರಿಗೆ ದೈಹಿಕ ಅಂಗವಿಕಲತೆ ಎಂದೂ ಅವರ ಸಾಧನೆಗೆ ಅಡ್ಡ ಬರಲಿಲ್ಲ ಅವರು ಸಮಾಜಕ್ಕೆ ನೀಡಿರುವ ಕೊಡುಗೆಗಾಗಿ ಅವರನ್ನು ಇಂದಿಗೂ ನೆನಪಿಸಿಕೊಳ್ಳಲಾಗುತ್ತದೆ. ಅಸಮರ್ಥತೆಯುಳ್ಳವರಿಗೆ ಸೂಕ್ತ ಅವಕಾಶ ಒದಗಿಸಿಕೊಟ್ಟಲ್ಲಿ ಅವರಿಂದ ಅತ್ಯುತ್ತಮ ಫಲಿತಾಂಶಗಳನ್ನು ನಿರೀಕ್ಷಿಸಬಹುದು.

- ಅಸಮರ್ಥರಿಗೆ ಮಾಸಿಕ ರೂ. 500 ರಿಂದ 1,000 ಭತ್ಯೆಯನ್ನು ಕೊಡಲಾಗುತ್ತಿದೆ.
- ಕಡಿಮೆ ದರದ ಬಸ್ ಪಾಸ್‌ಗಳು, ಸರಕಾರದ ಎಲ್ಲ ಇಲಾಖೆಗಳಲ್ಲೂ, ನಿಗಮಗಳಲ್ಲೂ ಮೀಸಲಾತಿ.
- ಸ್ವ-ಉದ್ಯೋಗಕ್ಕೆ ಎನ್ ಹೆಚ್ ಎಫ್ ಡಿ ಸಿ ಸಂಸ್ಥೆಯಿಂದ ಸಾಲ ಸೌಲಭ್ಯ.
- ಅಸಮರ್ಥರರಿಗಾಗಿ ಶಾಲೆಗಳನ್ನು ತೆರೆಯಲಾಗಿದೆ, ಉಚಿತ ವಿದ್ಯಾಭ್ಯಾಸ 18ನೇ ವಯಸ್ಸಿನವರೆಗೆ.
- ಮಾಸಿಕ ಹಾಗೂ ಮೆರಿಟ್ ಆಧಾರಿತ ಶಿಷ್ಯವೇತನಗಳು.
- ಅಸಮರ್ಥರ ಹಕ್ಕುಗಳು ಮತ್ತು ಅವರ ಸಮಾನ ಅವಕಾಶಗಳನ್ನು ನೋಡಿಕೊಳ್ಳುವ ಕಮೀಷನರ್ ಅನ್ನು ನೇಮಿಸಲಾಗಿದೆ.
- ಆಧಾರ ಯೋಜನೆಯ ಅಡಿಯಲ್ಲಿ ಸ್ವ-ಉದ್ಯೋಗಕ್ಕಾಗಿ ಸಾಲ ಸೌಲಭ್ಯವನ್ನು ಒದಗಿಸಲಾಗುವುದು.
- ಉಚಿತವಾಗಿ ದೂರವಾಣಿ ಬೂತ್‌ಗಳನ್ನು ಒದಗಿಸಲಾಗಿದೆ.
- ಗಾಲಿ ಕುರ್ಚಿಗಳು, ತ್ರಿಚಕ್ರ ವಾಹನಗಳು, ಶ್ರವಣ ಸಾಧನಗಳು, ಬ್ರೈಲ್ ಕೈಗಡಿಯಾರಗಳು ಮುಂತಾದವುಗಳನ್ನು ಉಚಿತವಾಗಿ ಒದಗಿಸಲಾಗುತ್ತಿದೆ.
- ಮಾನಸಿಕ ದುರ್ಬಲತೆಯುಳ್ಳವರ ತಾಯಿತಂದೆಯರಿಗೆ ವಿಮಾ ಯೋಜನೆ.
- ನಿರಾಮಯ ಯೋಜನೆಯಲ್ಲಿ ಮಕ್ಕಳ ಕಾಯಿಲೆಗಾಗಿ ಖರ್ಚುಮಾಡಿದ ಹಣವನ್ನು ಮರುಪಾವತಿ ಮಾಡಲಾಗುತ್ತದೆ.

ಅಸಮರ್ಥತೆಯುಳ್ಳ ಜನರಿಗೆ ಸಮಾನ ಅವಕಾಶಗಳು, ಅವರ ಹಕ್ಕುಗಳ ರಕ್ಷಣೆ ಮತ್ತು ಅವರ ಸಂಪೂರ್ಣ ಸಹಭಾಗಿತ್ವಕ್ಕಾಗಿ 1995ರಲ್ಲಿ ಸಂಸತ್ತು ಕೇಂದ್ರ ಕಾಯಿದೆಯೊಂದನ್ನು ಜಾರಿಗೆ ತಂದಿದ್ದೂ, ಅದು 1996 ರಿಂದ ಜಾರಿಯಲ್ಲಿದೆ. 2016 ರಲ್ಲಿ ಜಾರಿಗೆ ತಂದಿರುವ ಕಾಯ್ದೆಯಲ್ಲಿ ಇನ್ನೂ ಹಲವಾರು ಸೇವೆಗಳು ಲಭ್ಯವಿದ್ದು, 21 ತರಹದ ಅಸಮರ್ಥತೆಗಳನ್ನು ಗುರುತಿಸಲಾಗಿದೆ.

